ಶಾ ಗೇ ಶ

---

# ಸ್ವಾತಂತ್ರ್ಯದೇವಿ
# ಕಿತ್ತೂರ ಚೆನ್ನಮ್ಮರಾಣಿ



ಸ ಮಾ ಜ ಪು ಸ್ತ ಕಾ ಲ ಯ, ಧಾ ರ ವಾ ಡ–೧

ಪ್ರಕಾಶಕರು :
ಮನೋಹರ ಘಾಣೇಕರ

ಪ್ರಥಮ ಮುದ್ರಣ :
ಜನೆವರಿ ೨೬, ೧೯೬೮

*



*

ಬೆಲೆ : ರೂ. ೧.೦೦

ಮುದ್ರಕರು :
ರವೀಂದ್ರ ಘಾಣೇಕರ,
ಎಲ್. ಪಿ. ಟಿ.
ಪ್ರತಿಭಾ ಮುದ್ರಣ, ಧಾರವಾಡ—೧

## ಸ್ವಾತಂತ್ರ್ಯದೇವಿ

# ಕಿತ್ತೂರ ಚೆನ್ನಮ್ಮರಾಣಿ

### ೧

ಕಿತ್ತೂರ ದೊರೆ **ಮಲ್ಲಸರ್ಜ ದೇಸಾಯಿ**ಯು ಅಂದು ತನ್ನ ಅರಮನೆಯಲ್ಲಿ ಮಂತ್ರಾಲೋಚನೆಗಾಗಿ ಸ್ವಾಮಿನಿಷ್ಠ ಸೇನಾನಿ **ಗುರುಸಿದ್ದಪ್ಪ**ನನ್ನು ಕರೆಯಿಸಿದ್ದನು. **ರುದ್ರಮ್ಮ**ರಾಣಿಯೂ ದೊರೆಯ ಮಂತ್ರಾಲೋಚನೆಯಲ್ಲಿ ಭಾಗವಹಿಸಬೇಕಾಗಿತ್ತು. ಅತ್ಯಂತ ಮಹತ್ವವಾದ ರಾಜಕಾರಣದಲ್ಲಿ ದೊರೆಯು ರುದ್ರಮ್ಮನ ಅಭಿಪ್ರಾಯವನ್ನು ಕೇಳಿಕೊಳ್ಳುತ್ತಿದ್ದನು. ಗುರುಸಿದ್ದಪ್ಪನು ಮಹಾ ಸೇನಾನಿಯಲ್ಲದೆ ಮಹಾ ಪ್ರಧಾನಿಯೂ ಆಗಿದ್ದನು. ಅವನು ಮಲ್ಲಸರ್ಜನ ಪಂಚಪ್ರಾಣಗಳಂತಿದ್ದನು. ಕಿತ್ತೂರ ರಾಜ್ಯಕ್ಕೆ ಅವನು ದೊಡ್ಡ ಆಧಾರಸ್ತಂಭವಾಗಿದ್ದನು. ರುದ್ರಮ್ಮನಾದರೂ ವೀರಪತ್ನಿಯಾಗಿದ್ದಳು. ಅವಳು ಪತಿಗೆ ಯೋಗ್ಯ ಮಾರ್ಗದರ್ಶಕಳಾಗಿದ್ದಳು. ಆದುದರಿಂದ ದೇಸಾಯಿಣಿಯು ಮಹತ್ವದ ರಾಜಕಾರಣದಲ್ಲಿ, ವಿಚಾರಕ್ಕಾಗಿ ಸ್ವಾಮಿನಿಷ್ಠ ಸೇನಾಪತಿಯನ್ನು ಕರೆಯಿಸಿಕೊಳ್ಳಲು ಸಲಹೆ ಕೊಡುತ್ತಿದ್ದಳು.

ಓಲಗಶಾಲೆಯನ್ನುಳಿದು ಅರಮನೆಯಲ್ಲಿ ದೊರೆಯು ತನ್ನನ್ನು ಕರೆಯಿಸಿದ್ದರ ಉದ್ದೇಶವು ಗುರುಸಿದ್ದಪ್ಪನಿಗೆ ತಿಳಿಯದಿರಲಿಲ್ಲ. ಅವನು ಮುತ್ಸದ್ದಿಯಾಗಿದ್ದನು. ಇಷ್ಟು ದಿನಗಳವರೆಗೆ ಅನೇಕ ಕಷ್ಟನಷ್ಟಗಳನ್ನೂ, ಯಾತನೆಗಳನ್ನೂ ಅನುಭವಿಸಿದ ದೊರೆಗೆ ಮುಂದೆ ಹಾಯಾಗಿ ಕಾಲಕಳೆಯುವ ದಾರಿಯನ್ನು ಹುಡುಕುವ ಉದ್ದೇಶವುಳ್ಳವನಾಗಿರಬಹುದೆಂದು ಅವನು ಬಗೆದನು. ಅವನು ದೊರೆಯ ಆದೇಶದ ಮೇರೆಗೆ ಅರಮನೆಗೆ ಬಂದನು. ಮಲ್ಲಸರ್ಜ ದೇಸಾಯಿಯೂ, ರುದ್ರಮ್ಮರಾಣಿಯೂ ಸುವರ್ಣಮಯ ಮಂಚದ ಮೇಲೆ ಕುಳಿತಿದ್ದರು. ಗುರುಸಿದ್ದಪ್ಪನು ಅಲ್ಲಿಗೆ ಬಂದು ದೊರೆಗೂ, ರಾಣಿಗೂ ಅಭಿವಂದಿಸಿ, ತನಗಾಗಿ ಇರಿಸಿದ ಆಸನದಲ್ಲಿ ಕುಳಿತುಕೊಂಡನು. ಆಗ ಮಲ್ಲಸರ್ಜ ದೊರೆಯು—

ಗುರುಸಿದ್ದಪ್ಪನವರೆ, ಇಂದು ನಿಮ್ಮನ್ನು ಒಂದು ಆಪ್ತಾಲೋಚನೆಗಾಗಿ ಕರೆಯಿಸಿದ್ದೇನೆ. ಕಿತ್ತೂರ ರಾಜ್ಯವು ಈಗ ಸರ್ವಸ್ವತಂತ್ರವಾಗಿದೆ. ಅನೇಕ ಕಷ್ಟನಷ್ಟಗಳನ್ನು ಅನುಭವಿಸಿದ ನಾವು ಈಗ ಸ್ವತಂತ್ರರಾಗಿ ಬಾಳತೊಡಗಿದ್ದೇವೆ. ನಾವು ರಾಜ್ಯದಲ್ಲಿಯ ಪ್ರಜೆಗಳು ಸುಖಿಯಾಗಿ ಹೇಗೆ ಬಾಳಬೇಕೆಂಬ ವಿಚಾರ–ವ್ಯವಸ್ಥೆಗಳನ್ನು ಮಾಡತೊಡಗಿದ್ದೇವೆ. ರಾಜ್ಯದ ಭದ್ರತೆಗಾಗಿ ಸಾಕಷ್ಟು ಶಸ್ತ್ರಾಸ್ತ್ರಗಳೂ, ಸೈನ್ಯವೂ ಇರುವದು. ಆಸ್ಥಾನದಲ್ಲಿ ಕವಿಗಳಿಗೂ, ವಿದ್ವಾಂಸರಿಗೂ ಆಶ್ರಯವಿದೆ. ರಾಜಧಾನಿಯು ವೃದ್ಧಿಂಗತವಾಗತೊಡಗಿದೆ. ಪೇಶವೆಯವರ ಸರದಾರ **ಪರಶುರಾಮ ಭಾವು**ವಿನ ಕೊನೆಯೆ ನಮ್ಮ ಪಾರತಂತ್ರ್ಯದ ಕೊನೆಯಾಯಿತು. ಅಂದಿನಿಂದ ಐದು ವರ್ಷದ ಕಾಲದಲ್ಲಿ ನಾನು ಸ್ವಾಮಿನಿಷ್ಠರಾದ ನಿಮ್ಮ ಸಹಾಯದಿಂದ ರಾಜ್ಯದಲ್ಲಿ ಸುಖಶಾಂತಿಗಳು ನೆಲೆಗೊಳ್ಳುವಂತೆ ಮಾಡಿದ್ದೇನೆ. ಇಂತಹ

ಸುಖದ ಕಾಲದಲ್ಲಿ ಒಂದು ನೋವು ಮಾತ್ರ ನನಗೆ ಉಳಿದೇ ಇರುವದು. ಅದಕ್ಕಾಗಿ ನಾನು ಹಗಲಿರುಳು ಚಡಪಡಿಸುತ್ತಿದ್ದೇನೆ. ”

ಮಲ್ಲಸರ್ಜ ದೊರೆಯ ಮಾತು ಕೇಳಿ ಗುರುಸಿದ್ಧಪ್ಪನು ಅಚ್ಚರಿಗೊಂಡನು. ಎಲ್ಲ ಗಂಡಾಂತರಗಳನ್ನು ನೀಗಿಸಿಕೊಂಡಿದ್ದರೂ ದೊರೆಗೆ ಚಡಪಡಿಕೆಯೇತರದೆಂಬುದು ಅವನಿಗೆ ತೋಚದಾಯಿತು. ಆಗ ಅವನು ವಿನಯದಿಂದ,

“ ದೊರೆಗಳೆ, ತಮ್ಮ ರಾಜ್ಯ ಚಿಕ್ಕದು, ಆದರೆ ಅತ್ಯಂತ ಆದರ್ಶಪ್ರಾಯವಾಗಿದೆ. ಸುಖ-ಸಮೃದ್ಧವಾಗಿದೆ. ಪ್ರಜೆಗಳು ಏಕನಿಷ್ಠರಿರುವರು. ಓಲಗದಲ್ಲಾದರೂ ಸ್ವಾಮಿನಿಷ್ಠ ಕರ್ಮಚಾರಿಗಳಿಗೆ ಕೊರತೆಯಿಲ್ಲ. ರಾಣಿಯವರಾದರೂ ತಮ್ಮನ್ನು ನೆಳಲಿನಂತೆ ಅನುಸರಿಸುವವರಾಗಿದ್ದಾರೆ. ಹೀಗಿದ್ದು ಚಡಪಡಿಕೆ ಏಕೆ ? ”

“ ನೀವು ಹೇಳುವದೆಲ್ಲ ಸರಿ. ಆದರೆ ನನ್ನ ಚಡಪಡಿಕೆ ಬೇರೆ ವಿಧವಾದದ್ದಾಗಿದೆ. ಅದು ನನ್ನ ಮಾನಾಪಮಾನದ ಪ್ರಶ್ನೆ ! ”

“ ಪ್ರಭುಗಳೆ, ಸ್ಪಷ್ಟವಾಗಿ ಹೇಳದೆ ತಿಳಿಯದು ಈ ಅಲ್ಪಮತಿಗೆ. ”

“ಮೈಸೂರಿನ ಟೀಪುಸುಲ್ತಾನನು ನನ್ನನ್ನು ಸೆರೆಹಿಡಿದು ನನಗೆ ಮಾರ್ಮಿಕ ಮಾತುಗಳನ್ನಾಡಿ ಅಪಮಾನಗೊಳಿಸಿದ್ದಾನೆ. ಅವನ ಮೇಲಿನ ಸೇಡುತೀರಿಸಿಕೊಳ್ಳಬೇಕೆಂದು ನನ್ನ ಮಹತ್ವಾಕಾಂಕ್ಷೆಯಿದೆ. ನನ್ನ ಗತಜೀವನವು ಅನೇಕ ಕಷ್ಟಗಳನ್ನನುಭವಿಸಿದೆ. ಅಪಮಾನಕ್ಕೊಳಗಾಗಿದೆ. ಮರಾಟರು ನಮ್ಮ ರಾಜ್ಯವನ್ನು ತೆಗೆದುಕೊಂಡಿದ್ದರೂ ನನ್ನ ಮಾನವನ್ನು ಸೂರೆಗೊಂಡಿದ್ದಿಲ್ಲ. ಆದರೆ ಟೀಪುವು ನನ್ನನ್ನು ನೋಯಿಸಿದಂತೆ ಯಾರೂ ನೋಯಿಸಿಲ್ಲ; ಯಾರೂ ಅಪಮಾನಗೊಳಿಸಿಲ್ಲ. ಟೀಪುವಿನೊಡನೆ ಈ ವೀರರಾಣಿಯು ಖಾಡಾಖಾಡ ಯುದ್ಧ

ಮಾಡಿ ಅವನನ್ನು ದಂಗುಗೊಳಿಸಿದಳು. ಇವಳ ಬಗ್ಗೆ ಟೀಪುವೇ ಧನ್ಯೋದ್ಗಾರ ತೆಗೆದನು. ಆಗ ನಮಗೆ ದುರ್ದೈವದಿಂದ ಸೋಲುಂಟಾಯಿತು. ಅವನು ನನ್ನನ್ನು ಕೊಪ್ಪಳದ ಸೆರೆಮನೆಯಲ್ಲಿಟ್ಟಾಗ ಈ ವೀರ ಸತಿಯು ಪೇಶ್ವೆಯವರ ಸಹಾಯದಿಂದ ನನ್ನನ್ನು ಬಂಧಮುಕ್ತನನ್ನಾಗಿ ಮಾಡಿದಳು. ನಾನು ಸೆರೆಯಾಳಾದಾಗ ಟೀಪುವು ನನ್ನ ಘನತೆಯನ್ನು ತಿಳಿಯದೆ ಸಾಮಾನ್ಯ ಸೆರೆಯಾಳಿನಂತೆ ನಡೆಯಿಸಿಕೊಂಡು, ಅನೇಕ ಹೀನ ವಚನಗಳಿಂದ ನನ್ನನ್ನು ಅಪಮಾನಗೊಳಿಸಿದನು. ಅದುದರಿಂದ ಅವನ ಮೇಲಿನ ಸೇಡು ತೀರಿಸಿಕೊಳ್ಳಬೇಕಾಗಿದೆ. ನನ್ನ ಸ್ನೇಹಿತರಾದ ದೇಸಾಯಿಗಳ ಹಾಗು ಪೇಶವೆಯವರ ಸಹಾಯದಿಂದ ಟೀಪುವಿನ ಮೇಲಿನ ಸೇಡು ತೀರಿಸಿಕೊಳ್ಳಬೇಕಾಗಿದೆ. ಇದಕ್ಕೆ ನಿಮ್ಮ ಅಭಿಪ್ರಾಯವೇನು. ”

ಮಲ್ಲಸರ್ಜ ದೊರೆಯ ಮಾತುಗಳಿಂದ ಗುರುಸಿದ್ದಪ್ಪನು ವಿಚಾರಕ್ಕೊಳಗಾದನು. ಟೀಪುವು ಸಣ್ಣ ಪುಟ್ಟ ಸರದಾರನಾಗಿರಲಿಲ್ಲ. ಬಲಿಷ್ಠನಾದ ಸುಲ್ತಾನನಾಗಿದ್ದನು. ಅವನ ಸೈನ್ಯಶಕ್ತಿಯು ಅತ್ಯಂತ ಬಲಾಢ್ಯವಾದದ್ದಾಗಿತ್ತು. ರಾಜ್ಯವೂ ದೊಡ್ಡದಿತ್ತು. ಇಂತಹ ನೊಡನೆ ಕೈಗೊಡುವದೆಂದರೆ ಆನೆಯೊಡನೆ ಆಡು ಕಾದಿದಂತಾಗುತ್ತಿತ್ತು. ಅದರಲ್ಲೂ, ಎಲ್ಲ ದೇಸಾಯರೂ, ಪೇಶವೆಯವರೂ, ಇನ್ನಿತರ ಸರದಾರರೂ ಒಕ್ಕಟ್ಟಾಗಿ ಬಲವನ್ನು ಹೆಚ್ಚುಗೊಳಿಸುವ ಪರಿಸ್ಥಿತಿಯಿರಲಿಲ್ಲ. ಪೇಶವೆಯವರ ಸಹಾಯವಿಲ್ಲದೆ ಈ ಕಾರ್ಯವು ಈಡೇರುವಂತಿದ್ದಿಲ್ಲ. ಪೇಶವೆಯವರಾದರೂ ಎಷ್ಟರಮಟ್ಟಿಗೆ ಸಹಾಯ ಮಾಡುವರೋ ಹೇಳಬರುವಂತಿದ್ದಿಲ್ಲ. ಆಗ ಪ್ರಬಲರಾಗತೊಡಗಿದ್ದವರು ಇಂಗ್ಲೀಷರು. ಪರಕೀಯರ ಸಹಾಯವನ್ನು ಪಡೆದರೆ ತೋಳವನ್ನು ಕುರಿ ಕಾಯುಲು ಹಚ್ಚಿದಂತಾಗುತ್ತಿತ್ತು. ದೊರೆಯ ಮನಸ್ಸಿ

ನಲ್ಲಿ ಈ ಬಗೆಯ ಆಲೋಚನೆ ಹುಟ್ಟಿದ್ದರಿಂದ ಗುರುಸಿದ್ದಪ್ಪನು ಯೋಚನೆಗೊಳಗಾದನು. ಆಗ ಅವನು ವಿನಯದಿಂದ,

" ಪ್ರಭುಗಳೆ, ಟೀಪುವು ನಿಮ್ಮನ್ನು ನೋಯಿಸಿದ್ದು ಅತ್ಯಂತ ಅನುಚಿತವಾಗಿದೆ. ತಮ್ಮಂತೆಯೇ ನನ್ನ ಮನಸ್ಸೂ ಕುದಿಯುತ್ತಿದೆ. ನಮ್ಮ ಗುರಿಗಳು ಸಾಧಿಸಬೇಕಾದರೆ ಮೊದಲು ನಮ್ಮಲ್ಲಿ ಭದ್ರತೆ ಬೇಕು. ಎಲ್ಲ ದೇಸಾಯಿಯರೂ ಒಕ್ಕಟ್ಟಾದರೆ ನಮ್ಮನ್ನು ಟೀಪು ವಾಗಲಿ, ಪೇಶವೆಯವರಾಗಲಿ ಕೆಣಕಲಾರರು. ಪುಂಡ ಪಾಳೆಯಗಾರ ಹೈದರನಿಂದ ಪಾದಾಕ್ರಾಂತಗೊಳಿಸಲ್ಪಟ್ಟ ರಾಜ್ಯವು ಬಹು ದಿನ ಅವನ ವಂಶಕ್ಕೆ ಉಳಿಯಲಾರದು. ನಮ್ಮನ್ನು ಪೇಶವೆಯವರು ನೋಯಿಸಿದ್ದರೂ, ಟೀಪುವಿನಂತೆ ಅಪಮಾನಗೊಳಿಸಲಿಲ್ಲ. ಕಿತ್ತೂರು ಹಿಂದೆ ಅನುಭವಿಸಿದ ಕಷ್ಟವನ್ನು ನೆನೆಯಬಾರದು. ಟೀಪುವು ಕಿತ್ತೂರನ್ನು ಆಕ್ರಮಿಸಿದ ಬಳಿಕ ಪೇಶವೆಯವರ ಸರದಾರರು ಈ ನಾಡನ್ನು ವಶಪಡಿಸಿಕೊಂಡರು. ತರುವಾಯ ಟೀಪುವಿನ ಸರದಾರ ಬದ್ರುಲ್ ಝಮಾನನು ಮತ್ತೆ ಕಿತ್ತೂರನ್ನು ಪಾದಾಕ್ರಾಂತಗೊಳಿಸಿ ನಿಮ್ಮನ್ನು ಸೆರೆಹಿಡಿದನು. ಆಗ ನೀವು ದೈವಯೋಗದಿಂದ ಪಾರಾಗಿ ಮರಾಟರ ಸಹಾಯದಿಂದ ಮತ್ತೆ ಕಿತ್ತೂರಿಗೆ ಜೀವಕಳೆ ತಂದಿರಿ. ಆದರೂ ಕಿತ್ತೂರ ನಾಡು ಪೇಶವೆಯವರ ವಶದಲ್ಲುಳಿದು ನೀವು ಉಂಬಳಿಗಾರರಾದಿರಿ. ಪೇಶವೆಯವರ ಸರದಾರ ಪರಶುರಾಮ ಪಟವರ್ಧನನು ಮರಣ ಹೊಂದಿದ ಬಳಿಕ ನೀವು ಮತ್ತೆ ಈ ನಾಡನ್ನು ಸ್ವತಂತ್ರಗೊಳಿಸಿದಿರಿ. ನಾವು ಟೀಪುವಿನಿಂದ ಗಾಸಿಯಾದಷ್ಟು ಯಾರಿಂದಲೂ ಆಗಿಲ್ಲ. ಸದ್ಯಕ್ಕೆ ನಾವು ಎಲ್ಲ ದೇಸಾಯರನ್ನು ಒಂದುಗೂಡಿಸೋಣ. ಅನಂತರ ಪೇಶವೆಯವರ ಕಡೆಗೆ ಧಾವಿಸೋಣ. ನಮ್ಮ ಬಲವು ಪರಿಪೂರ್ಣವಾಗುವವರೆಗೆ ಟೀಪುವಿನ ನೆರಳಿಗೆ ಹೋಗಕೂಡದು.

ನಾವು ಎಲ್ಲ ದೇಸಾಯಿಯವರು ಒಂದುಗೂಡಿದೆವೆಂದರೆ ಮರಾಟರಾದರೂ ನಮ್ಮ ನೆರಳಿಗೆ ಬರಲಾರರು. ಒಡಕಿನಿಂದ ನಮ್ಮ ರಾಜ್ಯವು ಹೀನಬಲವಾಗತೊಡಗಿದೆ. ಈ ಲಾಭವನ್ನು ಧೂರ್ತರಾದ ಕಂಪನಿ ರಾಜ್ಯಶಾಸಕರು ಹೊಂದುತ್ತಲಿದ್ದಾರೆ. ಆದರೆ ಈ ಅರಿವು ಪೇಶವೆಯವರಿಗೂ ಇಲ್ಲ, ನಿಜಾಮನಿಗೂ ಇಲ್ಲ. ಟೀಪುವಾದರೋ ಪರಕೀಯರಾದ ಫ್ರೆಂಚರ ನೆರವು ಪಡೆಯಲು ಆತುರನಾಗಿದ್ದಾನೆ. ಅವನು ಆ ಕೆಲಸ ಮಾಡದೆ ದೇಶೀಯ ರಾಜರೊಡನೆ ಸ್ನೇಹಸಂಬಂಧ ಬೆಳೆಯಿಸಿದ್ದರೆ ಕಂಪನಿಯವರ ರಾಜ್ಯವು ಇಷ್ಟುಹೊತ್ತಿಗೆ ನಾಮಶೇಷವಾಗುತ್ತಿತ್ತು. ಆದರೆ ಈ ಬುದ್ಧಿಯು ನಮ್ಮಲ್ಲಿಯ ಪ್ರಬಲರಾದ ಯಾವ ರಾಜರಲ್ಲಿಯೂ ಹುಟ್ಟದೆ ಇರುವದು ದೈವದುರ್ವಿಪಾಕವು ! ”

ಗುರುಸಿದ್ದಪ್ಪನವರ ಅಭಿಪ್ರಾಯವು ರುದ್ರಮ್ಮರಾಣಿಗೆ ಸರಿಯಾಗಿ ತೋರಿತು. ಆಗ ಅವಳು ಪತಿಯನ್ನು ಕುರಿತು,

“ ದೊರೆಗಳೆ, ಸೇನಾಪತಿಗಳ ಸೂಚನೆಯಂತೆ ಕರ್ನಾಟಕದೊಳಗಿನ ಎಲ್ಲ ಪಾಳೆಯಗಾರರಲ್ಲಿ ಸ್ನೇಹವನ್ನು ಬೆಳೆಯಿಸುವದು ನಮ್ಮ ಆದ್ಯ ಕರ್ತವ್ಯವಾಗಿದೆ. ನಾವೆಲ್ಲ ದೇಸಾಯಿಯವರು ಒಂದುಗೂಡಿದರೆ ಯಾರೂ ನಮ್ಮ ನೆರಳಿಗೆ ಬರಲಾರರು. ಈ ಕೆಲಸವು ಕೈಗೂಡಿದ ಬಳಿಕ ಮುಂದಿನ ಯೋಚನೆ ಮಾಡೋಣ. ನೀವು ಸ್ವಂತವಾಗಿ ಒಬ್ಬೊಬ್ಬ ಸಂಸ್ಥಾನಿಕನ ಹಾಗೂ ದೇಸಾಯಿಯ ಕಡೆಗೆ ಹೋಗಿ ವಿಚಾರ–ವಿನಿಮಯ ಮಾಡಿ ಒಕ್ಕಟ್ಟನ್ನು ಸ್ಥಾಪಿಸಿದರೆ ಯಾವುದೂ ಅಸಾಧ್ಯವಲ್ಲ. ನಮ್ಮ ಬಲವು ಈ ಬಗೆಯಾಗಿ ಬೆಳೆದ ಬಳಿಕ ಟೀಪುವೇ ನಮ್ಮೆಲ್ಲರನ್ನು ಕೂಡಿದರೆ ಎಲ್ಲರೂ ಕೂಡಿ, ದ್ವೀಪಾಂತರದಿಂದ ಬಂದು ಇಲ್ಲಿ ನೆಲೆಸಿ ರಾಜ್ಯವಿಸ್ತಾರ ಮಾಡತೊಡಗಿದ ಇಂಗ್ಲಿಷರನ್ನು ಹೊರಗೆ ಹಾಕೋಣ. ಪೇಶವೆಯವರು ಹಾಗು ಟೀಪುವು-ನಮಗೆ ನಿಜವಾದ

ಶತ್ರುಗಳಲ್ಲ. ಅವರು ಹೇಗಿದ್ದರೂ ಸ್ವದೇಶಿಯರು. ಕಂಪನಿಯ ರಾಜ್ಯವು ದಕ್ಷಿಣದಲ್ಲಿ ಹಬ್ಬಗೊಡದಂತೆ ನೋಡಿಕೊಳ್ಳುವದೇ ನಮ್ಮ ಗುರಿಯಾಗಬೇಕು. ಮೊದಲು ನಮ್ಮ ಬಲವನ್ನಾದರೂ ಬೆಳೆಸೋಣ. ಅನಂತರ ಮುಂದಿನ ವಿಚಾರ."

ರುದ್ರಮ್ಮನ ವಿಚಾರವು ಮಲ್ಲಸರ್ಜ ದೊರೆಗೂ, ಗುರುಸಿದ್ದಪ್ಪನಿಗೂ ಸಮಂಜಸವಾಗಿ ತೋರಿತು. ತರುವಾಯ ಮೊಟ್ಟಮೊದಲು ಕಾಕತಿಯ ಧೂಳಪ್ಪದೇಸಾಯಿಯ ಕಡೆಗೆ ಹೋಗಬೇಕೆಂದು ಅಂದು ಗೊತ್ತಾಯಿತು.

೨

ಕಾಕತಿಯ ಧೂಳಪ್ಪದೇಸಾಯಿಯೆಂದರೆ ದೊಡ್ಡ ಸಂಸ್ಥಾನಿಕನೇನಲ್ಲ. ಕೆಲವೊಂದು ಗ್ರಾಮಗಳ ಜಹಾಗೀರಿಯು ಅವನ ವಶದಲ್ಲಿತ್ತು. ಕೆಲವುಕಾಲ ಮೈಸೂರ ಒಡೆತನದಲ್ಲಿದ್ದರೆ, ಕೆಲವುಕಾಲ ಮರಾಟರ ವಶದಲ್ಲಿ ಆತನ ದೇಶಗತಿಯು ಇರುತ್ತಿತ್ತು. ಅವನು ಹೆಚ್ಚಾಗಿ ಸಾಹಸ ಮಾಡದೆ ಇದ್ದ ಸ್ಥಿತಿಯಲ್ಲಿ ತನ್ನ ಜಹಾಗೀರಿಯನ್ನು ಕಾಯ್ದುಕೊಂಡಿದ್ದನು. ಅವನಿಗೆ ಪುತ್ರಸಂತಾನವಿರಲಿಲ್ಲ. '**ಚೆನ್ನಮ್ಮ**' ಎಂಬ ಒಬ್ಬಳೇ ಒಬ್ಬಳು ಮಗಳು. ಚೆನ್ನಮ್ಮನು ಅಸಾಮಾನ್ಯಳಾಗಿದ್ದಳು. ಗಂಡುಮಕ್ಕಳಿಲ್ಲವೆಂಬ ತಂದೆಯ ಕೊರಗನ್ನು ಪೂರ್ಣವಾಗಿ ನಿವಾರಿಸಿದ್ದಳು. ಇವಳು ಚಿಕ್ಕತನದಲ್ಲಿಯೆ ಕತ್ತಿ ಭಾಲೆಗಳೊಡನೆ ಆಟವಾಡುತ್ತಿದ್ದಳು. ತಂದೆಯೊಡನೆ ಬೇಟೆಗೆ ಹೋಗುತ್ತಿದ್ದಳು. ಒಮ್ಮೊಮ್ಮೆ ಪುರುಷವೇಶದಿಂದ ಅಶ್ವಾರೋಹಿಯಾಗಿ ಬೇಟೆಗೆ ಹೋಗುತ್ತಿದ್ದಳು. ಒಮ್ಮೊಮ್ಮೆ ಸಣ್ಣಪುಟ್ಟ ಕಾಳಗದಲ್ಲಿ ಸಹ ಭಾಗವಹಿ

ಸುತ್ತಿದ್ದಳು. ಪುರುಷವೇಷದಿಂದ ಕಾಡಾಟಕ್ಕೆ ನಿಂತರೆ ಇವಳು ವೀರ ಅಭಿಮನ್ಯುವನ್ನು ಹೋಲುತ್ತಿದ್ದಳು. ನಾಮಾಂಕಿತ ಯೋಧರನ್ನು ಕೂಡ ಕತ್ತಿಯ ದ್ವಂದ್ವದಲ್ಲಿ ಇವಳು ಪರಾಜಯಗೊಳಿಸಿದ್ದಳು. ದೇಸಾಯಿಯು ಇವಳಿಗೆ ಚಿಕ್ಕತನದಲ್ಲಿ ಕನ್ನಡ, ಮರಾಠಿ, ಉರ್ದು ಶಿಕ್ಷಣ ಕೊಡಿಸಿದ್ದಲ್ಲದೆ, ಬಿಲ್ಲು ಬಾಣಗಳ ವಿದ್ಯೆಯಲ್ಲಿಯೂ, ಖಡ್ಗವಿದ್ಯೆಯಲ್ಲಿಯೂ ಪಾರಂಗತಳನ್ನಾಗಿ ಮಾಡಿದ್ದನು. ಇವಳಿಗೆ ಮಹಾಭಾರತ, ರಾಮಾಯಣ, ಬಸವೇಶ್ವರನ ವಚನ ಮೊದಲಾದ ಧಾರ್ಮಿಕ ಗ್ರಂಥಗಳ ಅಭ್ಯಾಸವನ್ನೂ ಮಾಡಿಸಿದ್ದನು. ಧೂಳಪ್ಪ ದೇಸಾಯಿಗೆ ಇವಳು ಒಬ್ಬಳೇ ಮಗಳಿದ್ದರೂ ಹೆಣ್ಣು-ಗಂಡು ಮಕ್ಕಳ ಅಕ್ಕರೆಯನ್ನು ಪೂರೈಸುತ್ತಿದ್ದಳು. ಅವಳನ್ನು ನೋಡಿ ಎಲ್ಲ ಜನರೂ ಬೆರಗಾಗುತ್ತಿದ್ದರು. ಚೆನ್ನಮ್ಮನನ್ನು ವರಿಸಲು ಯಾವ ಪುಣ್ಯವಂತನುಜನ್ಮತಾಳಿರಬಹುದೆಂದು ಅವರು ವಿಚಾರಮಾಡುತ್ತಿದ್ದರು. ಅವಳನ್ನು ವರಿಸುವ ಭಾಗ್ಯವು ತಮಗೆ ಲಭಿಸಬೇಕೆಂದು ಎಷ್ಟೋ ರಾಜಕುಮಾರರೂ, ದೇಸಾಯಿ ಮನೆತದ ತರುಣರೂ ಆಶೆಪಟ್ಟು ಕೊಂಡಿದ್ದರು.

ಚೆನ್ನಮ್ಮನಿಗೆ ಈಗ ಹದಿನೈದು ವರ್ಷ. ಯಾವನಾದರೂ ಯೋಗ್ಯ ವರನನ್ನು ಹುಡುಕಬೇಕೆಂದು ಧೂಳಪ್ಪ ದೇಸಾಯಿಯ ಹವಣಿಕೆ. ತಂದೆಯ ಹವಣಿಕೆಯನ್ನು ಚೆನ್ನಮ್ಮನು ತಾಯಿಯಾದ ಪದ್ಮಾವತಿದೇವಿಯಿಂದ ಅರಿತಳು. ಆಗ ಅವಳಿಗೆ ತನ್ನ ತಾಯಿಯ ಮುಂದೆತನ್ನ ಮನೋದಯವನ್ನು ಪ್ರಕಟಿಸದಿರುವದಾಗಲಿಲ್ಲ. ತನಗೆ ವರನನ್ನು ಹುಡುಕುವದಕ್ಕಾಗಿ ತಂದೆಯು ಪ್ರಯತ್ನಿಸುವ ಕಾರಣವಿಲ್ಲವೆಂದೂ, ತನಗೆ ಬೇಕಾದ ವರನನ್ನು ತಾನೇ ವರಿಸುವೆನೆಂದೂ ತಿಳಿಸಿದಳು. ಪದ್ಮಾವತಿದೇವಿಯು ಮಗಳ ಮನೋದಯವನ್ನು ಪತಿಗೆ ತಿಳಿಸಿದಳು, ದೇಸಾಯಿಯಾದರೂ ಅವಳು ತನ್ನ ಇಚ್ಛೆಯಂತೆ ಮಾಡ

ಬಹುದೆಂದು ವರಾನ್ವೇಷಣದ ಕಾರ್ಯವನ್ನು ಬಿಟ್ಟುಗೊಟ್ಟನು. ಗುಣ–ರೂಪ ಸಂಪನ್ನೆಯಾದ ಚೆನ್ನಮ್ಮನು ಯಾವ ಪುಣ್ಯ ಪುರುಷನಿಗೆ ಮಾಲೆ ಹಾಕುವಳೋ ಎಂದು ಜನರು ಅನ್ನತೊಡಗಿದರು.

ಕಾಕತಿಯ ಅಡವಿಯಲ್ಲಿ ಒಂದು ಹುಲಿಯು ಬಂದು ಜನರಿಗೂ ದನಕರಗಳಿಗೂ ಪೀಡೆ ಕೊಡತೊಡಗಿತ್ತು. ಧೂಳಪ್ಪ ದೇಸಾಯಿಯು ಆ ಹುಲಿಯನ್ನು ಹೊಡೆಯಲು ಬೇಟೆಗಾರರನ್ನು ಕಳಿಸಿದ್ದರೂ ಅವರಿಂದ ಬೇಟೆಯು ಸಾಧ್ಯವಾಗಿರಲಿಲ್ಲ. ಒಂದು ದಿನ ಚೆನ್ನಮ್ಮನೇ ತಂದೆಯ ಬಳಿಗೆ ಬಂದು, ಜನರನ್ನೂ ದನಕರುಗಳನ್ನೂ ಹಿಂಸೆ ಪಡಿಸುತ್ತಿರುವ ಹುಲಿಯನ್ನು ನಮ್ಮ ಅಡವಿಯಲ್ಲಿ ಇರಗೊಡುವದು ಉಚಿತವಲ್ಲವೆಂದು ಹೇಳಿ, ಹುಲಿಯ ಬೇಟೆಗೆ ಸಿದ್ಧಳಾದಳು.

ಅಂದು ಚೆನ್ನಮ್ಮನು ಪುರುಷವೇಷಧಾರಣ ಮಾಡಿದ್ದಳು. ಬೆನ್ನಿಗೆ ಬತ್ತಳಿಕೆಯನ್ನು ಬಿಗಿದು, ಕೈಯಲ್ಲಿ ಬಿಲ್ಲು ಹಿಡಿದು, ಕುದುರೆಯನ್ನೇರಿ ಅಡವಿಗೆ ಹೊರಟಳು. ಹದಿನೈದು ವರ್ಷದ ಪ್ರಾಯದ ಆ ಯುವತಿಯು ಚಕ್ರವ್ಯೂಹವನ್ನು ಭೇದಿಸಲು ಹೊರಟ ಅಭಿಮನ್ಯುವಿನಂತೆ ಶೋಭಿಸುತ್ತಿದ್ದಳು.

ಚೆನ್ನಮ್ಮನು ಅರಣ್ಯಕ್ಕೆ ಹೊರಟಳು. ಹುಲಿಯು ಅರಣ್ಯದಲ್ಲಿ ಭೀಕರ ಗರ್ಜನೆ ಮಾಡುತ್ತಲಿತ್ತು. ಚೆನ್ನಮ್ಮನು ಆ ಧ್ವನಿಯನ್ನು ಕೇಳಿ ಒಳ್ಳೇ ಹುರುಪುಗೊಂಡಳು. ಅವಳು ಧ್ವನಿ ಕೇಳುತ್ತಿರುವ ನಿಟ್ಟಿಗೆ ಕುದುರೆಯನ್ನೋಡಿಸಿದಳು. ಕೆಲವು ವೇಳೆಯಲ್ಲಿ ಅವಳು ಹುಲಿ ಇದ್ದ ಸ್ಥಳವನ್ನು ತಲುಪಿದಳು. ಭೀಕರವಾದ ಹುಲಿಯು ಚೆನ್ನಮ್ಮನನ್ನು ನೋಡಿದೊಡನೆಯೆ ವೇಗದಿಂದ ಧಾವಿಸಿ ಅವಳ ಕಡೆಗೆ ಬಂದಿತು. ಕೂಡಲೆ ಚೆನ್ನಮ್ಮನು ಬಿಲ್ಲಿಗೆ ಬಾಣವನ್ನು ಹೂಡಿ ಒಳ್ಳೆಯ ಶಕ್ತಿಯಿಂದ ಹೊಡೆದಳು. ಆ ಬಾಣವು ತಗಲಿದೊಡನೆಯೆ ಹುಲಿಯು

ಬಹಳೇ ಸಿಟ್ಟಿನಿಂದ ಚೆನ್ನಮ್ಮನ ಕಡೆಗೆ ಓಡಿ ಬಂದಿತು. ಕೂಡಲೆ ಚೆನ್ನಮ್ಮನು ಕುದುರೆಯ ಮೇಲಿಂದಲೆ ಹುಲಿಯ ತೆರೆದ ಬಾಯಿಗೆ ಗುರಿಯಿಟ್ಟು ತನ್ನ ಬರ್ಚಿಯನ್ನೆಸೆದಳು. ಒಡನೆಯೆ ಆ ಹುಲಿಯು ಚೀತ್ಕಾರ ಮಾಡುತ್ತ ನೆಲಕ್ಕೆ ಬಿದ್ದು ಮರಣ ಹೊಂದಿತು! ಚೆನ್ನಮ್ಮನು ಕುದುರೆಯಿಂದಿಳಿದಳು. ಅದೇ ಕ್ಷಣಕ್ಕೆ ಹುಲಿಯ ಬಳಿಗೆ ಒಬ್ಬ ಅಶ್ವಾರೋಹಿಯು ಬಂದನು. ಅವನನ್ನು ನೋಡಿದ ಕೂಡಲೆ " ತಾವು ಯಾರು ? " ಎಂದು ವಿಚಾರಿಸಿದಳು.

" ಬಾಲಕಾ ! ನೀನು ಚಿಕ್ಕವನಾದರೂ ಇಂತಹ ದೊಡ್ಡ ಹುಲಿಯನ್ನು ಹೊಡೆದೆಯಲ್ಲವೆ ? ನೀನು ಅಪ್ರತಿಮ ವೀರನು. ನಿನ್ನಂತಹ ಬಾಲ ವೀರರನ್ನು ನಾನು ನನ್ನ ಜೀವಮಾನದಲ್ಲಿ ಇಂದೇ ಕಂಡೆನು. ಹುಲಿಯ ಗರ್ಜನೆಯನ್ನು ಕೇಳಿ ನಾನು ಇತ್ತ ಧಾವಿಸಿದೆನು. ನಾನು ಬರುವಷ್ಟರಲ್ಲಿ ನೀನು ಇದನ್ನು ಸಂಹರಿಸಿ ಬಿಟ್ಟೆ! ನಾನು ಕಿತ್ತೂರಿನ ಮಲ್ಲಸರ್ಜ ದೇಸಾಯಿಯು. ಧೂಳಪ್ಪ ದೇಸಾಯಿಯ ಕಡೆಗೆ ಹೊರಟಿದ್ದೇನೆ. ಬಾಲಕಾ ನೀನು ಯಾರು ? "

ಚೆನ್ನಮ್ಮನು ನಸುನಗೆಯಿಂದ ತಲೆಬಾಗಿಸಿ ನಿಂತಳು. ಅವಳು ಕಡೆಗಣ್ಣಿನಿಂದ ದೇಸಾಯಿಯನ್ನು ನೋಡಿದಳು. ಅವಳನ್ನು ನೋಡಿ, " ಬಾಲಕಾ, ನೀನು ಯಾರೆಂಬುದನ್ನು ತಿಳಿಸಲಾರೆಯಾ ? "

ಚೆನ್ನಮ್ಮನು ನಮಸ್ಕರಿಸಿದಳು— ಅವಳು ಕಿರುನಗೆ ಬೀರಿ ದೇಸಾಯಿಯನ್ನು ನೋಡತೊಡಗಿದಳು. ಅವಳ ಧ್ವನಿ, ನೋಟ ಮೊದಲಾದವುಗಳನ್ನು ನೋಡಿ ದೇಸಾಯಿಗ ಒಂದು ವಿಧವಾದ ಸಂಶಯವು ಉತ್ಪನ್ನವಾಯಿತು. ಅವನು, " ಬಾಲವೀರಾ, ನೀನು ಯಾರು? ನಿನ್ನ ಹೆಸರೇನು ? "

ಚೆನ್ನಮ್ಮನು ಗಹಗಹಿಸಿ ನಕ್ಕಳು. ಕೂಡಲೆ ದೇಸಾಯಿಯು

ಅವಳ ಬಳಿಗೆ ಬಂದು ಅವಳ ತಲೆಯ ಮೇಲಿನ ಮುಂಡಾಸವನ್ನು ತೆಗೆದನು, ಆಗ ಅವನಿಗೆ ವಿಸ್ಮಯವಾಯಿತು. " ಬಾಲಕನಲ್ಲ, ಬಾಲಿಕೆ!" ಎಂದು ಅವನು ಉದ್ಗಾರ ತೆಗಿದನು.

ಚೆನ್ನಮ್ಮನು ಗಹಗಹಿಸಿ ನಗುತ್ತ ನಿಂತಳು. ಅವಳು ಕಿತ್ತೂರ ದೊರೆಯನ್ನು ಎವೆಯಿಕ್ಕದೆ ನೋಡತೊಡಗಿದಳು.

" ಬಾಲಿಕೆ, ನೀನು ಯಾರ ಕುಮಾರಿ ತಿಳಿಸುವದಿಲ್ಲವೇ ?"

" ದೊರೆಗಳೆ, ನಾನು ಕಾಕತಿಯ ಧೂಳಪ್ಪ ದೇಸಾಯಿಯ ಏಕಮಾತ್ರ ಕುಮಾರಿ ಚೆನ್ನಮ್ಮನು. "

ಮಲ್ಲಸರ್ಜ ದೊರೆಯು ಚೆನ್ನಮ್ಮನ ಹೆಸರು ಕೇಳಿದ್ದನು. ಆದರೆ ಅವಳು ಇಂತಹ ವೀರಪುತ್ರಿಯೆಂಬುವನ್ನು ಅರಿತಿರಲಿಲ್ಲ. ಆಗ ಅವನು ನಸುನಗುತ್ತ, " ಇಂತಹವಳನ್ನು ವಿವಾಹವಾಗುವ ಪುರುಷನು ಧನ್ಯನು ! "

" ಪರಯುವತಿಯನ್ನು ಮುಟ್ಟುವ ನೀವು ಪರಮ ಸಾಹಸಿಗರು ! "

" ಈ ಬಗ್ಗೆ ನಾನು ಕ್ಷಮೆ ಕೋರುವೆನು. "

" ಒಂದು ಮಾತನ್ನು ನಡೆಯಿಸಿದರೆ ಕ್ಷಮೆ ದೊರೆಯುವದು!"

" ನಿನ್ನಂತಹ ವೀರ ವನಿತೆಯ ಒಂದು ಮಾತೇಕೆ ಸಹಸ್ರ ಮಾತು ನಡೆಯಿಸುವೆನು. "

" ವಚನ ಕೊಡಿರಿ !" ಚೆನ್ನಮ್ಮನು ಕೈ ಮುಂದೆ ಮಾಡಿದಳು.

" ತೆಗೆದುಕೋ ವಚನವನ್ನು ! "

" ನನ್ನನ್ನು ನೀವು ನಿಮ್ಮ ಅರ್ಧಾಂಗಿಯೆಂದು ವರಿಸಬೇಕೆಂಬುದೇ ನನ್ನ ಅಪೇಕ್ಷೆ. ಈ ನನ್ನ ಮಾತನ್ನು ನೀವು ಈಡೇರಿಸಬೇಕು."

ಮಲ್ಲಸರ್ಜ ದೊರೆಯಲ್ಲಿಯೂ ಚೆನ್ನಮ್ಮನ ವಿಷಯವಾಗಿ

ಅನುರಾಗವು ಉತ್ಪನ್ನವಾಗಿತ್ತು. ಚೆನ್ನಮ್ಮವಂತೂ ದೇಸಾಯಿಯನ್ನು ನೋಡಿದೊಡನೆಯೆ ಮನಸೋತಿದ್ದಳು. ಇಬ್ಬರ ಮನೋದಯವೂ ಒಂದಾಯಿತು. ಆದರೆ ಮಲ್ಲಸರ್ಜನು ಮಾತ್ರ ಮನದಲ್ಲಿ ಅಳುಕಿದನು. ಅವನು ವಿಚಾರ ಮಾಡುತ್ತ ನಿಂತದ್ದನ್ನು ನೋಡಿ ಚೆನ್ನಮ್ಮನು, "ಯಾಕೆ ! ಬಹಳೇ ವಿಚಾರ ಮಾಡುತ್ತಿರುವಂತೆ ತೋರುವದು ? ಕೊಟ್ಟ ವಚನ ಪಾಲಿಸಲಾರಿರಾ ? "

"ಚೆನ್ನಾ, ನಾನು ಎಂದೂ ವಚನಭ್ರಷ್ಟನಾಗುವದಿಲ್ಲ. ಆದರೆ ನಾನು ವಿವಾಹಿತನಿರುವೆನು. ರುದ್ರಾಳು ನನ್ನ ಅರ್ಧಾಂಗಿ. ಶಿವಲಿಂಗ ರುದ್ರಸರ್ಜನೆಂಬ ಚಿಕ್ಕ ಕುಮಾರನೂ ನನಗಿದ್ದಾನೆ ! "

"ಎಲ್ಲವನ್ನೂ ನಾನು ಬಲ್ಲೆ. ಅದಕ್ಕಾಗಿ ಯೋಚನೆಯೇಕೆ ? ನನ್ನ ಅಕ್ಕನು ನನ್ನನ್ನು ತಿರಸ್ಕರಿಸಿದರೆ ನಿಮ್ಮ ಹಾಗು ಅಕ್ಕನ ದಾಸಿಯಾಗಿ ಅಂತಃಪುರದಲ್ಲಿ ಬಾಳಲು ನನಗೆ ಅವಕಾಶ ದೊರೆಯಲಾರದೆ?"

ಚೆನ್ನಮ್ಮನ ಮಾತು ಕೇಳಿ ದೇಸಾಯಿಯು ದಂಗುಬಡಿದನು! ಕೂಡಲೆ ಅವನು ಪ್ರೇಮಭರದಿಂದ ಅವಳನ್ನು ಬಿಗಿದಪ್ಪಿ—"ಚೆನ್ನಾ. ನೀನು ಚಿಂತಿಸಬೇಡ. ಅಂತಹ ಪ್ರಸಂಗ ಬರಲಾರದು. ನಿನ್ನ ಅಕ್ಕನು ನಿನ್ನನ್ನು ಆನಂದದಿಂದ ಸ್ವಾಗತಿಸಬಹುದು. ಈಗ ನಾನು ನಿನ್ನ ತಂದೆಯ ಕಡೆಗೆ ಹೊರಟಿದ್ದೇನೆ. ನೀನು ಈಗ ನನ್ನವಳೇ ಆದೆ. ಆದರೆ ಇದಕ್ಕೆ ನಿನ್ನ ತಂದೆಯ ಸಹಕಾರವನ್ನು ದೊರಕಿಸಿಕೊಡುವದು ನಿನ್ನನ್ನೇ ಕೂಡಿದೆ. "

"ಪ್ರಭುಗಳೆ, ನನ್ನ ತಂದೆಗೆ ನಾನೊಬ್ಬಳೇ ಮಗಳು. ನಾನೂ ನನ್ನ ದೇಸಗತಿಯೂ ತಮ್ಮದೇ ಆಗಿದೆ. ನೀವು ಏನೂ ಚಿಂತೆ ಮಾಡಬೇಡಿರಿ. ನನ್ನ ತಂದೆಯು ನನ್ನ ಮಾತುಗಳನ್ನು ಎಂದೂ ಮೀರಲಾರನು.

" ಚೆನ್ನಾ, ನೀನು ನನ್ನನ್ನು ಆಕಸ್ಮಿಕವಾಗಿ ಪ್ರೇಮಿಸಿದೆ. ನಿನ್ನ ತಂದೆ ತಾಯಿಗಳು ಅನುಮತಿ ಕೊಡದಿದ್ದರೆ ಹೇಗೆ ? "

" ನೀವು ಈ ವಿಷಯದಲ್ಲಿ ಯೋಚಿಸಬೇಡಿರಿ, ನಾನು ನನ್ನ ವಿವಾಹಕ್ಕಾಗಿ ಸ್ವತಂತ್ರಳಿದ್ದೇನೆ. ಈ ಮೊದಲೆ ಅವರ ಆಶ್ವಾಸನೆ ದೊರೆತಿದೆ. "

ಮಲ್ಲಸರ್ಜ ದೊರೆಯು ಆನಂದಬಟ್ಟನು. ಇಬ್ಬರೂ ಕಾಗತಿಗೆ ಬಂದರು. ಧೂಳಪ್ಪದೇಸಾಯಿಯು ಮಲ್ಲಸರ್ಜ ದೊರೆಯನ್ನು ಸ್ವಾಗತಿಸಿದನು.

ಚೆನ್ನಮ್ಮನು ಪುರುಷವೇಷವನ್ನು ಬಿಟ್ಟು, ತನ್ನ ಉಡುವು ಧರಿಸಿ ಮಲ್ಲಸರ್ಜ ದೊರೆಯ ಮುಂದೆ ನಿಂತಳು. ಮಲ್ಲಸರ್ಜನು ಧೂಳಪ್ಪದೇಸಾಯಿಗೆ ಚೆನ್ನಮ್ಮನು ವೀರತನದಿಂದ ಹುಲಿಯನ್ನು ವಧಿಸಿದ ಸಂಗತಿಯನ್ನು ತಿಳಿಸಿದನು.

" ಚೆನ್ನಾ, ನೀನು ನನಗೆ ಹೇಳದೆ ಕೇಳದೆ ಏಕಾಕಿಯಾಗಿ ಇಂಥ ಘೋರ ಸಾಹಸಕ್ಕೆ ಕೈ ಹಾಕಬಹುದೆ ? "

" ಅಪ್ಪಾ ! ಇವರನ್ನು ನೋಡಿದೊಡನೆಯೆ ಹುಲಿಯು ಬೆದರಿ ನನ್ನ ಕಡೆಗೆ ಬಂತು. ನಾನು ಅದನ್ನು ಹೊಡೆದೆನು ಇಷ್ಟೇ ! "

" ಭಲೆ ! ಚೆನ್ನಾಗಿ ಹೇಳಿದೆ ! " ಎಂದು ದೇಸಾಯಿಯು ನಗುತ್ತ ನಿಂತನು.

ಧೂಳಪ್ಪದೇಸಾಯಿಗೆ ಮಗಳ ಒಲವು ಸೂಕ್ಷ್ಮವಾಗಿ ತಿಳಿಯಿತು. ಆಗ ಅವನು ಪ್ರೇಮದಿಂದ— " ಚೆನ್ನಾ ? ಮೊದಲು ನೀನು ಇವರ ಆತಿಥ್ಯದ ವ್ಯವಸ್ಥೆ ಮಾಡು. ನಾನು ಈ ಕೆಲಸಕ್ಕಾಗಿ ನಿನ್ನನ್ನೇ ನಿಯಮಿಸಿದ್ದೇನೆ. "

ರೋಗಿ ಬಯಿಸಿದ್ದೂ ಅದೆ; ವೈದ್ಯ ಹೇಳಿದ್ದೂ ಅದೆ !

೩

“ ಚೆನ್ನಾ, ನೀನು ವಿಚಾರವಂತಳಿರುವದರಿಂದ ನಾನು ನಿನಗೆ ಏನನ್ನೂ ಹೇಳಲಿಚ್ಛಿಸುವದಿಲ್ಲ. ನಿನ್ನ ಮನಸ್ಸು ಸಹಜವಾಗಿ ಪರಿವರ್ತನೆ ಹೊಂದುವಂತಹದಲ್ಲವೆಂಬುದನ್ನೂ ನಾನು ಬಲ್ಲೆನು. ನೀನು ಮಲ್ಲಸರ್ಜ ದೊರೆಗಳನ್ನು ಮೆಚ್ಚಿರುವೆ; ಅವರಾದರೂ ನಿನ್ನಲ್ಲಿ ಅನುರಾಗವುಳ್ಳವರಾಗಿದ್ದಾರೆಂಬದನ್ನು ಮನಗಂಡೆನು. ಆದರೆ ನೀವಿಬ್ಬರೂ ಇನ್ನೊಂದು ವಿಷಯದಲ್ಲಿ ಪೂರ್ಣವಿಚಾರ ಮಾಡಬೇಕಾದುದು ಅವಶ್ಯ. ಕಿತ್ತೂರ ದೊರೆಗಳಿಗೆ ರುದ್ರಮ್ಮನೆಂಬ ರಾಣಿಯೂ, ಶಿವಲಿಂಗರುದ್ರಸರ್ಜನೆಂಬ ಮಗನೂ ಉಂಟೆಂಬುದನ್ನು ನೀನು ಕೇಳಿರುವಿಯಷ್ಟೇ ? ದೇಸಾಯಿಯವರು ನಿನ್ನನ್ನು ವರಿಸಿದರೆ ಸಂಸಾರವು ವಿರಸವಾಗಿ ಯಾರಿಗೂ ಸೌಖ್ಯ ದೊರೆಯದಂತಾಗುವದೇನೋ ಎಂದು ನಾನು ಭಯಪಡುತ್ತಿರುವೆನು. ”

— ಚೆನ್ನಮ್ಮನು ತಾಯಿಗೆ ತನ್ನ ಮನೋದಯವನ್ನು ತಿಳಿಸಿದಾಗ ಪದ್ಮಾವತಿದೇವಿಯು ಹೀಗೆ ಮಗಳ ಮುಂದೆ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದಳು.

“ ಅವ್ವಾ, ನಾನು ಎಲ್ಲವನ್ನೂ ವಿಚಾರಿಸಿದ್ದೇನೆ. ನಾನು ರುದ್ರಮ್ಮರಾಣಿಯ ಸುಖವನ್ನು ನಷ್ಟಗೊಳಿಸಲು ಯತ್ನಿಸುವದಿಲ್ಲ. ನಾನಂತೂ ಮನಸಾ ಕಿತ್ತೂರ ದೊರೆಗಳನ್ನು ವರಿಸಿರುವೆನು. ಅವರಾದರೂ ಈ ಬಗ್ಗೆ ನನಗೆ ವಚನ ಕೊಟ್ಟಿದ್ದಾರೆ. ಇನ್ನು ರುದ್ರಮ್ಮರಾಣಿಯ ಆಕ್ಷೇಪಣೆಯುಂಟಾದರೆ, ನಾನು ಕಿತ್ತೂರ ರಾಜ-ರಾಣಿಯರ ದಾಸಿಯಾಗಿ ಅವರ ಅಂತಃಪುರದಲ್ಲಿ ಕಾಲಕಳೆಯುವೆನು. ದೊರೆಗಳ ಅಭಿಪ್ರಾಯದಂತೆ ಈ ಪ್ರಸಂಗವು ಪ್ರಾದುರ್ಭವಿಸಲಾರದೆಂದು ನಾನು ನಂಬಿದ್ದೇನೆ. ನನ್ನ ಅಕ್ಕನು ನನ್ನನ್ನು ಆದರದಿಂದ ಸ್ವಾಗತಿಸಬಹು

ದೆಂದು ನನ್ನ ಎಣಿಕೆ. ಇದರ ಮೇಲೆ ದೈವದಲ್ಲಿದ್ದಂತಾಗುವದು."

ಚೆನ್ನಮ್ಮನ ದೃಢಮನಸ್ಸನ್ನು ಪದ್ಮಾವತಿದೇವಿಯು ಪತಿಯಾದ ಧೂಳಪ್ಪದೇಸಾಯಿಗೆ ತಿಳಿಸಿದಳು. ತನಗೆ ಅನುರೂಪನಾದ ವರನನ್ನು ಆರಿಸಿಕೊಂಡದ್ದಕ್ಕಾಗಿ ದೇಸಾಯಿಗೂ ಪರಮಾನಂದವಾಯಿತು.

ಮಾರನೆಯ ದಿನ ಧೂಳಪ್ಪ ದೇಸಾಯಿಯು ತನ್ನ ಜಹಾಗೀರಿಯೊಳಗಿನ ಪ್ರಮುಖ ನಾಗರಿಕರನ್ನೂ ದಿವಾಣನನ್ನೂ, ಕರೆಯಿಸಿದನು. ಅವನು ತನ್ನ ಜನರನ್ನು ಕುರಿತು— "ಕಿತ್ತೂರ ದೊರೆಗಳಾದ ಮಲ್ಲಸರ್ಜ ದೇಸಾಯಿಯವರು ಒಂದು ಮಹತ್ವದ ರಾಜಕಾರಣಕ್ಕಾಗಿ ಇಲ್ಲಿಗೆ ಬಂದಿದ್ದಾರೆ. ಕರ್ನಾಟಕದಲ್ಲಿ ಅನೇಕ ದೇಸಗತಿಗಳಿವೆ. ನಮ್ಮಲ್ಲಿಐಕ್ಯವಿಲ್ಲದ್ದರಿಂದ ಪರಕೀಯಶತ್ರುಗಳು ಸುಲಭವಾಗಿನಮ್ಮನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳುವರು. ಟೀಪುವಂತೂ ಮೇಲಿಂದ ಮೇಲೆ ನಮಗೆ ತೊಂದರೆ ಕೊಡುತ್ತಿರುವನು. ನಾವೆಲ್ಲರೂ ಒಟ್ಟಾದರೆ ವೈರಿಗಳಿಗೆ ತಲೆಬಾಗಿಸುವ ಪ್ರಸಂಗವು ತಪ್ಪುವದು. ಈ ಬಗ್ಗೆ ತಮ್ಮೆಲ್ಲರ ಅಭಿಪ್ರಾಯವನ್ನು ಕೇಳಲು ಕರೆಯಿಸಿದ್ದೇನೆ."

ಧೂಳಪ್ಪದೇಸಾಯಿಯು ಹೀಗೆ ನುಡಿದ ಕೂಡಲೆ ಮಲ್ಲಸರ್ಜ ದೇಸಾಯಿಯು— "ಧೂಳಪ್ಪ ದೇಸಾಯಿಯವರ ಅಭಿಪ್ರಾಯಕ್ಕೆ ನೀವು ಸಮ್ಮತಿಸಿದರೆ ನಮ್ಮಲ್ಲಿ ಒಕ್ಕಟ್ಟು ಉಂಟಾಗಿ ಪರರ ಭಯವು ತಪ್ಪುವದು. ಕಿತ್ತೂರ ಸೇನಾಪತಿಗಳೂ, ಕಿತ್ತೂರ ಸೈನಿಕರೂ, ಕಿತ್ತೂರ ಪ್ರಜೆಗಳೂ ಎಷ್ಟೇ ಸ್ವಾಭಿಮಾನದಿಂದ ಕಾದಿದರೂ ಶತ್ರುಗಳಿಗೆ ತಲೆಬಾಗಬೇಕಾದ ಪ್ರಸಂಗವೊದಗಿದ್ದನ್ನು ನೀವು ಕೇಳಿದ್ದೀರಿ. ಇದಕ್ಕೆ ಕಾರಣವೆಂದರೆ ನಮ್ಮಲ್ಲಿಯ ಅನೈಕ್ಯವೇ."

ದೇಸಗತಿಯ ಪ್ರಮುಖ ಜನರೂ, ದಿವಾಣರೂ, ಸೇನಾಪತಿಯೂ ಮಲ್ಲಸರ್ಜದೊರೆಯ ಮಾತಿಗೆ ಒಪ್ಪಿದರು. ಎಲ್ಲ ದೇಸಾಯಿ

ಯರಿಗೂ ಕಾಕತಿಯಲ್ಲಾದ ಗೊತ್ತುವಳಿಯನ್ನು ತಿಳಿಸಿ ಅವರ ಮನ ವೊಲಿಸುವ ಕೆಲಸ ಮಾಡುವೆನೆಂದು ಮಲ್ಲಸರ್ಜ ದೇಸಾಯಿಯು ಎಲ್ಲ ಜನರಿಗೆ ತಿಳಿಸಿದನು. ಇಂಗ್ಲಿಷರನ್ನು ಹೊರಗೆ ಹಾಕಲು ಟೊಂಕ ಕಟ್ಟಿದ ಟೀಪುವು ಈ ದೇಶದ ಸಂಸ್ಥಾನಿಕರ ಸಹಾಯ ಹೊಂದದೆ ಪರಕೀಯರಾದ ಫ್ರೆಂಚರ ಸಹಾಯ ಕೋರತೊಡಗಿದ್ದಕ್ಕೆ ಅವನಿಗೆ ತಕ್ಕ ಪ್ರಾಯಶ್ಚಿತ್ತ ವಿಧಿಸಬೇಕೆಂದು ಎಲ್ಲರೂ ಗೊತ್ತುಮಾಡಿದರು. ತರುವಾಯ ಧೂಳಪ್ಪ ದೇಸಾಯಿಯು ಸಭಿಕರನ್ನುದ್ದೇಶಿಸಿ, " ನಮ್ಮ ಮಲ್ಲಸರ್ಜ ದೇಸಾಯಿಯವರು ಮಹಾಧೂರ್ತರು. ಒಂದು ಕಲ್ಲಿನಿಂದ ಎರಡು ಹಣ್ಣು ಕೆಡಹುವಂತಹ ಕಲಾವಿದರು! " ಎಂದು ನಗುತ್ತ ನುಡಿದನು.

ಸಭಿಕರಿಗೆ ಧೂಳಪ್ಪ ದೇಸಾಯಿಯ ಮಾತಿನ ಅರ್ಥವಾಗಲಿಲ್ಲ. ಮಲ್ಲಸರ್ಜ ದೇಸಾಯಿಗೆ ಮಾತ್ರ ಅವನ ಅಭಿಪ್ರಾಯವು ಹೊಳೆದು ನಸುನಕ್ಕನು. ತರುವಾಯ ದೇಸಾಯಿಯು, " ನನ್ನ ಕುವರಿ ಚೆನ್ನ-ಮ್ಮಾಜಿಯು ಈ ದೇಸಾಯಿಯವರನ್ನು ವರಿಸುವ ಸಂಕಲ್ಪ ಮಾಡಿದ್ದಾಳೆ. ದೇಸಾಯಿಯವರಾದರೂ ಅವಳನ್ನು ವರಿಸುವದಕ್ಕೆ ಆತುರರಾಗಿದ್ದಾರೆ. "

ದೇಸಾಯಿಯು ಈ ಸಂಗತಿಯನ್ನು ಹೇಳಿದ ಕೂಡಲೆ ಎಲ್ಲರೂ ಹರ್ಷನಿರ್ಭರರಾದರು. ಚೆನ್ನಮ್ಮಾಜಿಗೆ ಯೋಗ್ಯ ವರನು ದೊರೆತನೆಂದು ಎಲ್ಲರೂ ಮಾತಾಡತೊಡಗಿದರು. ಅವರೆಲ್ಲರೂ ತಮ್ಮ ಅಭಿಪ್ರಾಯವನ್ನು ಧೂಳಪ್ಪದೇಸಾಯಿಗೆ ತಿಳಿಸಿದರು. ಅವನ ಮನೆತನದ ಸ್ವಾಮಿಗಳು ಮಲ್ಲಸರ್ಜ ದೇಸಾಯಿಗೆ ಶುಭಾಶೀರ್ವಾದ ಮಾಡಿ ಶುಭಮುಹೂರ್ತದಲ್ಲಿ ಲಗ್ನಸಮಾರಂಭವನ್ನು ನೆರವೇರಿಸಿಯೆ ಕಿತ್ತೂರ ದೊರೆಗಳನ್ನೂ ಅವರ ರಾಣಿಯನ್ನೂ ಕಳುಹಿಸಬೇಕೆಂದು ಅವರು ತಮ್ಮ ಅಭಿಪ್ರಾಯ ವ್ಯಕ್ತಗೊಳಿಸಿದರು.

ಆಮಂತ್ರಣ ಪತ್ರಿಕೆಗಳು ಎಲ್ಲ ದೇಸಾಯಿಯರಿಗೂ, ಆಪ್ತೇಷ್ಟರಿಗೂ ಕಳುಹಿಸಲ್ಪಟ್ಟವು. ಕಿತ್ತೂರಿಗೂ ಆಮಂತ್ರಣವು ಹೋಯಿತು. ಪುರಪ್ರಮುಖರೂ, ರಾಜಕರ್ಮಚಾರಿಗಳೂ, ಅಂತಃಪುರದ ಜನರೂ ವಿವಾಹಸಮಾರಂಭಕ್ಕಾಗಿ ಆಗಮಿಸಿದರು. ಕಾಕತಿಯಲ್ಲಿ ಚೆನ್ನಮ್ಮನ ವಿವಾಹವು ವಿಜೃಂಭಣೆಯಿಂದ ನೆರವೇರಿತು. ಹಿರಿಯರಾಣಿ ರುದ್ರವ್ವನು, ತನಗೊಬ್ಬ ಒಡಹುಟ್ಟಿದ ತಂಗಿ ದೊರೆತಳೆಂದು ಆನಂದಸಾಗರದಲ್ಲಿ ಲೋಲಾಡಿದಳು. ತನಗೆ ಒಡಹುಟ್ಟಿದವರಿಲ್ಲದ್ದರಿಂದ ತನಗೆ ದೇವರು ಒಬ್ಬ ಅಕ್ಕನನ್ನು ದಯಪಾಲಿಸಿದನೆಂದು ಚೆನ್ನಮ್ಮನೂ ಸಂತುಷ್ಟಳಾದಳು.

ವಿವಾಹ ಸಮಾರಂಭವು ಪೂರೈಸಿದ ಬಳಿಕ ರಾಜದಂಪತಿಗಳು ಕಿತ್ತೂರ ಜನರೊಡನೆ ಪಯಣಬೆಳೆಯಿಸಿದರು. ಧೂಳಪ್ಪ ದೇಸಾಯಿಯೂ, ಪದ್ಮಾವತಿದೇವಿಯೂ ಮಗಳ ವಿಯೋಗದಿಂದ ಸ್ವಲ್ಪ ನೊಂದುಕೊಂಡರೂ, ಕೃತಕೃತ್ಯರಾದೆವೆಂದು ಆನಂದೋದಧಿಯಲ್ಲಿ ಮುಳುಗಿದರು.

೪

ಚೆನ್ನಮ್ಮರಾಣಿಯು ಕಿತ್ತೂರು ರಾಜಧಾನಿಯನ್ನು ಪ್ರವೇಶಿಸಿದ ಸ್ವಲ್ಪ ದಿವಸಗಳಲ್ಲಿಯೆ ವಿಚಿತ್ರ ಸ್ಥಿತ್ಯಂತರವುಂಟಾಯಿತು. ಅವಳು ಚಿಕ್ಕವಳಾಗಿದ್ದರೂ ರಾಜಕಾರಣದಲ್ಲಿ ನುರಿತವಳಾಗಿದ್ದುದರಿಂದ ಪ್ರತಿಯೊಂದು ರಾಜಕೀಯ ವಿಷಯಗಳ ಕಡೆಗೆ ಲಕ್ಷ್ಯಗೊಡಹತ್ತಿದಳು. ಸ್ವಾರ್ಥಿಗಳೂ, ಗೃಹಭೇದಿಗಳೂ ಆದ ಕರ್ಮಚಾರಿಗಳ ಕಡೆಗೆ ಇವಳು ಬಹಳೇ ಲಕ್ಷ್ಯ ಪೂರೈಸುತ್ತಿದ್ದಳು. ರುದ್ರಮ್ಮನು ಕೂಡ ಶೂರಳೂ,

ರಾಜಕಾರಣಿಯೂ ಆದ ರಾಣಿಯಾಗಿದ್ದಳು. ಅವಳು ತಲ್ಲೂರ ದೇಸಾ-ಯಿಯವರ ಕುಮಾರಿಯು. ಆದರೆ ಚೆನ್ನಮ್ಮನ ಮುಂದೆ ಅವಳ ತೇಜವು ಬಹಳೇ ಕಡಿಮೆಯಾಯಿತು. ತಂಗಿಯ ಆಗಮನದಿಂದ ತನ್ನ ಮೇಲಿನ ಭಾರವು ಕಡಿಮೆಯಾಯಿತೆಂದು ರುದ್ರಮ್ಮರಾಣಿಯು ಸಂತೋಷಬಟ್ಟಳು. ಅವರಿಬ್ಬರೂ ವಿವಾಹದ ಕಾಲದಲ್ಲಿ ಮಾತು ಕೊಟ್ಟಿದ್ದಂತೆ ಒಡಹುಟ್ಟಿದವರಂತೆ ನಡೆದುಕೊಳ್ಳುತ್ತಿದ್ದರು. ಚೆನ್ನಮ್ಮ ರಾಣಿಯು ಬಂದಬಳಿಕ ಮಲ್ಲಸರ್ಜ ದೇಸಾಯಿಗೆ ರಾಜಕಾರಣವು ಬಹಳೇ ಹಗುರಾಗಿ ಹೋಯಿತು. ಬಹುತರವಾಗಿ ಎಲ್ಲ ರಾಜಕಾರ್ಯ ಗಳನ್ನು ಚಿಕ್ಕರಾಣಿಯೆ ನಿರ್ವಹಿಸುತ್ತಿದ್ದುದರಿಂದ ಅವನು ಪರೆ ಉಚ್ಚಿದ ಹಾವಿನಂತಾಗಿದ್ದನು. ಪಂಡಿತರ ಚರ್ಚೆಯಲ್ಲಿಯೂ, ಕವಿ ಗಳ ಸಭೆಯಲ್ಲಿಯೂ, ಸಂಗೀತ ಶಾಲೆಯಲ್ಲಿಯೂ ಭಾಗವಹಿಸುತ್ತ ಅವನು ಸುಖವಾಗಿ ಕಾಲಕಳೆಯಹತ್ತಿದನು. ಒಕ್ಕಲತನದ ಸುಧಾ ರಣೆ ಹಾಗು ಸಂಸ್ಥಾನದ ಅಭಿವೃದ್ಧಿಕಾರ್ಯಗಳ ಕಡೆಗೆ ಅವನು ಲಕ್ಷ್ಯಪೂರೈಸತೊಡಗಿದನು. ಬೇರೆ ಬೇರೆ ಸಂಸ್ಥಾನಿಕರ ಬಳಿಗೆ ಹೋಗಿ ಎಲ್ಲ ಜಹಾಗೀರದಾರರೂ, ಪಾಳಯಗಾರರೂ, ದೇಸಾಯಿ ಯರೂ, ಸಂಸ್ಥಾನಿಕರೂ ಒಕ್ಕಟ್ಟಿನಿಂದ ನಡೆದು ವೈರಿಗಳ ದಾಳಿ ಯನ್ನು ಎದುರಿಸುವ ಸಂಬಂಧದಲ್ಲಿ ವಿಶ್ವಪ್ರಯತ್ನ ಮಾಡತೊಡ ಗಿದನು.

ಮಲ್ಲಸರ್ಜ ದೇಸಾಯಿಯು ಸಂಗೀತಪ್ರಿಯನಾಗಿದ್ದನು. ಅವನ ಆಸ್ಥಾನದಲ್ಲಿ ಎಷ್ಟೋ ಸಂಗೀತ ತಜ್ಞರಿದ್ದರು. ಅವನ ಗತಜೀವನವು ದುರ್ಧರವಾದ ಸಂಕಟದಲ್ಲಿಯೇ ಕಳೆದುದರಿಂದ ಅವನಿಗೆ ಇಂತಹ ವಿಷಯಗಳ ಕಡೆಗೆ ಲಕ್ಷ್ಯ ಪೂರೈಸುವುದಾಗಿರಲಿಲ್ಲ. ಅವನ ಚಿಕ್ಕ ರಾಣಿ ಚೆನ್ನಮ್ಮಾಜಿಯು ಸಂಗೀತದಲ್ಲಿ ಒಳ್ಳೇ ಪ್ರವೀಣಳಿದ್ದಳು

ಹಾಗು ವೀಣಾವಾದನದಲ್ಲಿಯೂ ಅಗ್ರಗಣ್ಯಳಾಗಿದ್ದಳು. ಅವಳು ಬಂದಂದಿನಿಂದ ಕಿತ್ತೂರು ಸಂಸ್ಥಾನದಲ್ಲಿ ಸಂಗೀತ ಕಲೆಗೆ ಕಳೆ ಬಂದಂತಾಯಿತು. ಚೆನ್ನಮ್ಮರಾಣಿಯು ಸಮಯ ದೊರೆತಾಗಲೆಲ್ಲ ವೀಣೆಬಾರಿಸುತ್ತ ಹಾಡುತ್ತಿದ್ದಳು; ಮಲ್ಲಸರ್ಜ ದೇಸಾಯಿಯವರೂ, ರುದ್ರಮ್ಮ ರಾಣಿಯೂ ಅವಳ ಸಂಗೀತ ಕೇಳುತ್ತ ತಲೆದೂಗುತ್ತಿದ್ದರು. ಬೇಸರವುಂಟಾದಾಗ ಇವರಿಬ್ಬರೂ ಚೆನ್ನಮ್ಮನ ರಾಣೀವಾಸಕ್ಕೆಬಂದು ಅವಳ ಗಾಯನ-ವಾದನಗಳಿಂದ ಆನಂದಗೊಳ್ಳುತ್ತಿದ್ದರು.

ಹೀಗೊಮ್ಮೆ ಚೆನ್ನಮ್ಮರಾಣಿಯ ಸಂಗೀತವು ಮುಗಿಯುತ್ತಲೆ ರುದ್ರಮ್ಮರಾಣಿಯು ಮಲ್ಲಸರ್ಜ ದೇಸಾಯಿಯ ಕಿವಿಯಲ್ಲಿ ಏನೋ ಹೇಳಿದಳು. ಕೂಡಲೆ ದೇಸಾಯಿಯು ನಗುಮೊಗದಿಂದ ಚೆನ್ನಮ್ಮನ ಮುಖವನ್ನು ನೋಡತೊಡಗಿದನು.

" ಅಕ್ಕಾ, ಏನದು ದೊರೆಗಳೊಡನೆ ನನ್ನ ಸಮ್ಮುಖದಲ್ಲಿಯೆ ಕಿವಿಮಾತು ? " ಎಂದು ಚೆನ್ನಮ್ಮರಾಣಿಯು ನುಡಿದಳು.

" ಅಹುದೇನೆ ? ಚೆನ್ನಾ ? " ಎಂದು ದೇಸಾಯಿಯು ಚಿಕ್ಕರಾಣಿಯನ್ನು ಕೇಳಿದನು.

" ಇದೇನು ಸಂದಿಗ್ಧವಾದ ಮಾತು ? " ಚೆನ್ನಮ್ಮರಾಣಿಯು ನುಡಿದಳು.

" ಸಂದಿಗ್ಧವಾದ ಮಾತೇ ಇಲ್ಲ; ಸ್ಪಷ್ಟಮಾತು ! " ರುದ್ರಮ್ಮ ನಸುನಕ್ಕಳು.

" ಅಂದರೆ ? "

" ನಮ್ಮ ದೊರೆಗಳಿಗೆ ಚಿಕ್ಕ ಯುವರಾಜನು ಜನಿಸುವ ಯೋಗವಿದೆಯೆಂದು ನಾನು ತಿಳಿಸಿದೆನು, ಅಷ್ಟೇ. ಮತ್ತೇನೂ ಇಲ್ಲ. "

" ಅಕ್ಕಾ, ನೀನು ಹೀಗೆ ವಿನೋದ ಮಾಡಬೇಕೆ ? " ಚೆನ್ನಮ್ಮ

ರಾಣಿಯು ಹೀಗೆ ನುಡಿದು, ಕೆಂಪಡರಿದ ಮುಖವನ್ನು ಮರೆಮಾಡಿಕೊಂಡು, ಹೊರಡಲೆಂದು ಎದ್ದಳು.

" ಗುಟ್ಟು ರಟ್ಟಾಯಿತೆಂದು ಹೊರಟೆಯೇನು ? " ಎಂದು ದೇಸಾಯಿ, ಚೆನ್ನಮ್ಮರಾಣಿಯನ್ನು, ನಗುತ್ತ ಕೇಳಿದನು.

" ಎಷ್ಟು ದಿನಗಳ ವರೆಗೆ ಗುಟ್ಟು ಗುಟ್ಟಾಗಿ ಉಳಿಯುವದು?" ಎಂದು ರುದ್ರಮ್ಮರಾಣಿಯು ನುಡಿದು— " ಚೆನ್ನಾ, ಕುಳಿತುಕೋ " ಎಂದು ಅವಳ ಕೈ ಹಿಡಿದು ಬಳಿಯಲ್ಲಿ ಕುಳ್ಳಿರಿಸಿಕೊಂಡಳು. ತರುವಾಯ ಅವಳು ದೊರೆಗೆ, " ಕಾಕತಿಗೆ ತಿಳಿಸಿರಿ. ಮೊದಲು ತೌರ ಪುನೆಯವರು ಹೂವು ಮುಡಿಸಬೇಕಾಗುವದು ಎಂದಳು. "

ಚೆನ್ನಮ್ಮನು ಮೌನವಾಗಿಯೆ ಇದ್ದಳು.

ನವಮಾಸ ತುಂಬಿದ ಬಳಿಕ ಚೆನ್ನಮ್ಮನು ಪುತ್ರರತ್ನವನ್ನು ಪ್ರಸವಿಸಿದಳು. ಮಗುವಿಗೆ '**ಶಿವಬಸವರಾಜ**' ಎಂದು ನಾಮಕರಣವಾಯಿತು.

ನಾಮಕರಣದ ದಿವಸ ರಾಜಗುರುಗಳಾದ ಕಲ್ಮಠದ ಗುರುಸಿದ್ಧಸ್ವಾಮಿಗಳು ದೇಸಾಯಿಯ ಆಮಂತ್ರಣದ ಮೇರೆಗೆ ಆಗಮಿಸಿದ್ದರು. ದೇಸಾಯಿಯ ರಾಜಕಾರಣದಲ್ಲಿ ಪ್ರಸಂಗವಶಾತ್ ಅವರು ಸಲಹೆಗಾರರಾಗಿದ್ದರು. ಮಹತ್ವದ ಕಾರ್ಯ ಕೈಕೊಳ್ಳುವಾಗ ದೇಸಾಯಿಯು ಸ್ವಾಮಿಯವರನ್ನು ಕರೆಯಿಸಿಕೊಂಡು ಮಂತ್ರಾಲೋಚನೆ ನಡೆಯಿಸುತ್ತಿದ್ದನು. ರುದ್ರಮ್ಮರಾಣಿಯು ಗುರುಗಳ ಪಟ್ಟಶಿಷ್ಯೆಯಾಗಿದ್ದಳು. ಚೆನ್ನಮ್ಮರಾಣಿಯು ಬಂದಾಗಿನಿಂದ ರುದ್ರಮ್ಮರಾಣಿಯು ರಾಜಕಾರಣದಿಂದ ಬಹುಮಟ್ಟಿಗೆ ಮನಸ್ಸು ತೆಗೆದಿದ್ದಳು, ಅವಳು ಗುರುಲಿಂಗ ಜಂಗಮಸೇವಾತತ್ಪರಳಾಗಿ ತತ್ವವಿವೇಚನೆಯಲ್ಲಿ ಕಾಲಕಳೆಯುತ್ತಿದ್ದಳು. ನಾಮಕರಣವಾದ ಬಳಿಕ ಸ್ವಾಮಿಗಳು— " ದೇಸಾಯಿ

ಯರೆ, ಹದಿನಾರನೆಯ ಶತಮಾನದಿಂದ ನಿಮ್ಮ ಸಂಸ್ಥಾನವು ನಡೆದು ಬಂದರೂ ಇಂತಹ ಆನಂದದ ದಿವಸವನ್ನು ಹಿಂದಿನವರು ಕಂಡಿರಲಿಕ್ಕಿಲ್ಲ. ಮುಂದೆಯೂ ಕಾಣುವರೋ ಇಲ್ಲವೋ. ಚೆನ್ನಮ್ಮರಾಣಿಯಂತಹ ಪ್ರಭಾವಶಾಲಿಯಾದ ವೀರ ವನಿತೆಯು ನಿಮ್ಮ ಕೈ ಹಿಡಿದು ಕಿತ್ತೂರ ಕೀರ್ತಿಯನ್ನು ಹಬ್ಬುವಂತೆ ಮಾಡಿದಳು. ಯುವರಾಜ ಶಿವಲಿಂಗರುದ್ರಸರ್ಜರಿಗಿಂತಲೂ ಚೆನ್ನಮ್ಮರಾಣಿಯ ಕುಮಾರನು ತೇಜಸ್ವಿಯಾಗುವನು. ”

“ ಸ್ವಾಮಿಯವರೆ, ನಮ್ಮ ಶಿವಬಸವರಾಜನನ್ನೇ ಯುವರಾಜನನ್ನು ಮಾಡೋಣ ” ಎಂದು ರುದ್ರಮ್ಮನು ಆನಂದದ ಭರದಲ್ಲಿ ನಿರ್ವಿಕಾರವಾಗಿ ನುಡಿದಳು.

ಈ ಮಾತು ಚೆನ್ನಮ್ಮರಾಣಿಗೆ ಸರಿದೋರಲಿಲ್ಲ. ಆಗ ಅವಳು ನಿರ್ಧಾರದ ಧ್ವನಿಯಿಂದ, “ ಅಕ್ಕಾ ನೀವು ಹೀಗೆ ಅನುಚಿತ ಆಡುವಿರೆಂದು ನಾನು ಗ್ರಹಿಸಿರಲಿಲ್ಲ.” ಎಂದು ನುಡಿದು ರಾಜಗುರುಗಳ ಚರಣಗಳನ್ನು ಮುಟ್ಟಿ—“ ಗುರುಗಳೆ, ರುದ್ರಮ್ಮರಾಣಿಯ ಸಂತಾನವೇ ಪಟ್ಟಕ್ಕೆ ಬಾಧ್ಯವು. ನಾನು ನನ್ನ ಶಿವಬಸವರಾಜನನ್ನು ಯುವರಾಜ **ಶಿವಲಿಂಗರುದ್ರ** ಸರ್ಜನ ಅಂಗರಕ್ಷಕನನ್ನಾಗಿ ಮಾಡುವೆನೆಂದು ನಿಮ್ಮ ಚರಣಸಾಕ್ಷಿಯಾಗಿ ಹೇಳುವೆನು. ಇಷ್ಟಲ್ಲದೆ ನನ್ನ ಸಂತಾನವು ಕಿತ್ತೂರ ಸೇವೆಗಾಗಿ ಮೀಸಲಾಗಿ ಇರಲಿ! ”

“ ಚೆನ್ನಾ ! ಇದೇನೆ ? ”

“ ಅಕ್ಕಾ, ನನ್ನ ಮಾತು ಹಿಮಾಚಲದಂತೆ ಅಚಲವಾದದ್ದೆಂದು ಪತಿಯ ಪಾದಸಾಕ್ಷಿಯಾಗಿ ಹೇಳುವೆನು. ”

“ ಚೆನ್ನಾ, ಹೀಗೇಕೆ ಆಡತೊಡಗಿದೆ ? ” ಎಂದು ಮಲ್ಲಸರ್ಜ

ದೇಸಾಯಿಯು ನುಡಿದು— “ ಭವಿಷ್ಯದ ಬಗ್ಗೆ ಈಗ ನಾವು ಚರ್ಚಿಸ ಬಾರದು. ” ಎಂದು ನುಡಿದು ಮಾತು ಮುಗಿಸಿದನು.

ತರುವಾಯ ರಾಜಗುರುಗಳು ದೇಸಾಯಿಯ ನಿರೋಪಹೊಂದಿ ತಮ್ಮ ಕಲ್ಮಠಕ್ಕೆ ಹೊರಟುಹೋದರು.

೫

ಮೈಸೂರ ನಾಲ್ಕನೆಯ ಯುದ್ಧವು ಮುಗಿಯಿತು. ಟೀಪು ಸುಲ್ತಾನನು ರಣಭೂಮಿಯಲ್ಲಿ ಮೈಗೊಟ್ಟನು. ವೈಭವಶಾಲಿಯಾದ ಶ್ರೀರಂಗಪಟ್ಟಣ ರಾಜಧಾನಿಯು ಹಾಳಾಯಿತು. ಮೈಸೂರ ರಾಜಕ್ಕೆ ಮೊದಲಿನ ಅರಸರೆ ಬಂದರು. ಆದರೆ ಸ್ವತಂತ್ರವಾಗಿಯಲ್ಲ; ಕಂಪನಿ ಸರಕಾರದ ಕೈಕೆಳಗೆ ಬಂದರು. ಇಂಗ್ಲಿಷರ ಭವಿಷ್ಯವು ಆಗ ಉಜ್ವಲ ವಿತ್ತು. ಭಾರತದಲ್ಲೆಲ್ಲ ಅವರ ವರ್ಚಸ್ಸು ಬೆಳೆದಿತ್ತು. ಮಹಾರಾಷ್ಟ್ರ ರಾಜ್ಯವು ಕೂಡ ತತ್ತರಿಸಹತ್ತಿತ್ತು. ಏತದ್ದೇಶೀಯ ರಾಜರಲ್ಲಿ ಸ್ವಾಭಿಮಾನ-ಸ್ವದೇಶಾಭಿಮಾನಗಳಿರಲಿಲ್ಲ. ಐಕ್ಯವೂ ಇರಲಿಲ್ಲ. ಸ್ವಾರ್ಥವು ಪ್ರತಿಯೊಬ್ಬ ರಾಜ-ಮಹಾರಾಜರಲ್ಲಿ ನೆಲೆಗೊಂಡಿತ್ತು. ಸಣ್ಣಪುಟ್ಟ ಮಲ್ಲಸರ್ಜ ದೇಸಾಯಿಯಂತಹ ಒಬ್ಬಿಬ್ಬರ ಪ್ರಯತ್ನ ಗಳು ಹೇಗೆ ಸಫಲವಾಗಬೇಕು ? ಚೆನ್ನಮ್ಮನಂತಹ ಒಬ್ಬಿಬ್ಬರು ಸ್ವಾತಂತ್ರ್ಯಪ್ರೇಮಿಗಳ ಸಾಹಸವು ಹೇಗೆ ಸಿದ್ಧಿಹೊಂದಬೇಕು? ಭಾರ ತದ ಅಂತಿಮ ಸಮ್ರಾಟ್ ಪೃಥ್ವೀರಾಜ ಚವ್ಹಾಣನಿಗಿಂತ ಸುಮಾರು ಸಾವಿರ ವರ್ಷಗಳ ಗತೇತಿಹಾಸದ ಅವಲೋಕನೆಯಿಂದಲೂ ಭಾರತೀ ಯರು ಎಚ್ಚರವಾಗಲಿಲ್ಲ. ಮತ್ತೆ ಅದೇ ಸ್ವಾರ್ಥ, ಅದೇ ಒಡಕು, ಅದೇ ರಾಷ್ಟ್ರಾಭಿಮಾನಶೂನ್ಯತೆ ! ಇಂತಹ ಪರಿಸ್ಥಿತಿಯಿಂದ ಭಾರತದ ಏಳ್ಗೆ ಹೇಗಾಗುವದೋ ಎಂಬ ಯೋಜನೆಯನ್ನು ಸಾಮಾನ್ಯರು

ಎಷ್ಟು ಮಾಡಿ ಪ್ರಯೋಜನವೇನು ? ಪ್ರಯೋಜನವಾಗಲಿ, ಆಗದಿರಲಿ, ಪ್ರಸಂಗವಶದಲ್ಲಿ ಭಾವೀ ಪೀಳಿಗೆಗೆ ತಮ್ಮ ಜೀವನವು ಆದರ್ಶವಾಗಿಯಾದರೂ ಉಳಿದಿರಲೆಂಬುದೇ ಅಂತಹರ ಮಹತ್ವಾಕಾಂಕ್ಷೆಯಾಗಿತ್ತು. ಈ ಆಕಾಂಕ್ಷೆಗಾಗಿಯೆ ಅವರು ತಮ್ಮ ಸರ್ವಸ್ವವನ್ನೂ ಬಲಿಯೊಪ್ಪಿಸಿದರು. ಮಲ್ಲಸರ್ಜ ದೇಸಾಯಿಯೂ, ಚೆನ್ನಮ್ಮರಾಣಿ-ಯೂ ಇದೇ ವಿಧದ ಮನೋವೃತ್ತಿಯವರಿದ್ದರು. ಟೀಪುವಿನ ಪರಾಜಯದಿಂದ ತಮ್ಮ ಪೀಡೆಯು ಕೆಲಮಟ್ಟಿಗೆ ನಿವಾರಣೆಯಾಯಿತೆಂದು ಅವರು ಸಂತೋಷಪಟ್ಟರೂ, ಪರಕೀಯರಾದ ಆಂಗ್ಲರ ಶಕ್ತಿಯು ಭಾರತದಲ್ಲಿ ವೃದ್ಧಿಂಗತವಾಗುತ್ತ ನಡೆದುದಕ್ಕಾಗಿ ಅವರು ಪರಮ ದುಃಖಿತರಾದರು.

ಟೀಪುವಿನ ಕಾಟ ತಪ್ಪಿತೆನ್ನುವಷ್ಟರಲ್ಲಿ **ಧುಂಡಜಿ ವಾಘನೆಂಬ** ಪುಂಡನು ಕೊಲೆ–ಸುಲಿಗೆ–ಕೊಳ್ಳೆ ಮೊದಲಾದ ಅತ್ಯಾಚಾರಗಳನ್ನೆಸಗುತ್ತ ಕಿತ್ತೂರ ರಾಜ್ಯವನ್ನು ಹೊಕ್ಕನು. ಅವನ ಹಾವಳಿಯನ್ನು ತಗ್ಗಿಸಲು ಪೇಶವೆಯವರ ಸೇನಾಪತಿ **ಧೋಂಡೋಪಂತ ಗೋಖಲೆ**ಯು ಸಾಗಿಬಂದನು. ತುಮುಲವಾದ ಈ ಕಾಳಗದಲ್ಲಿ ಧೋಂಡೋಪಂತನು ಹತನಾದನು. ಬಳಿಕ **ಬಾಪೂ ಗೋಖಲೆ**ಯು ದೊಡ್ಡ ಸೈನ್ಯದೊಡನೆ ಬಂದು ಧುಂಡಜಿಯನ್ನು ಕಾಳಗದಲ್ಲಿ ಸಂಹರಿಸಿದನು. ಈ ಕದನದಲ್ಲಿ ಕಿತ್ತೂರ ದೇಸಾಯಿಯವರು ಪೇಶವೆಯವರಿಗೆ ಚೆನ್ನಾಗಿ ಸಹಾಯ ಮಾಡಿದರು. ಧುಂಡಜಿಯ ಪೀಡೆಯು ತಪ್ಪಿದ ಬಳಿಕ ಕಿತ್ತೂರವರು ಇನ್ನೂ ನಿಶ್ಚಿಂತೆಯಿಂದ ಬಾಳುವಂತಾಯಿತು. ಅವರು ಪೇಶವೆಯರಿಗೆ ಪ್ರತಿವರ್ಷ ಅರವತ್ತು ಸಾವಿರ ರೂಪಾಯಿ ಕಪ್ಪವನ್ನೊಪ್ಪಿಸುತ್ತ ಈಗ ಅವರ ಮಾಂಡಲಿಕನಾಗಿ ತಮ್ಮ ಸಂಸ್ಥಾನವನ್ನು ಸ್ವತಂತ್ರವಾಗಿ ಆಳಹತ್ತಿದರು.

**ನಾನಾಫಡನವೀಸನು** ಪೇಶವೆಯವರ ಓಲಗದಲ್ಲಿರುವವರೆಗೆ ಇಂಗ್ಲಿಷರು ಅವರಿಗೆ ಅಂಜುತ್ತಿದ್ದರು. ಆದರೆ ಫಡವೀಸನು ಮೃತಿ ಹೊಂದಿದ ಬಳಿಕ ಅವರಿಗೆ ಅಂಜಿಕೆಯು ಬಹುಮಟ್ಟಿಗೆ ಕಡಿಮೆಯಾಯಿತು. ಪೇಶವೆ **ಎರಡನೆ ಬಾಜೀರಾಯ**ನಿಗೆ ಪಟ್ಟ ಕೊಡಿಸುವ ಕಾರ್ಯದಲ್ಲಿ ಇಂಗ್ಲಿಷರ ಪ್ರವೇಶವಾಯಿತು. ಜನರಲ್ **ವೆಲ್ಲೆಸ್ಲಿ**ಯು ಶ್ರೀರಂಗಪಟ್ಟಣದಿಂದ ತನ್ನ ಸೈನ್ಯದೊಡನೆ ಬಾಜೀರಾಯನಿಗೆ ಪಟ್ಟವನ್ನು ಕೊಡಿಸುವದಕ್ಕಾಗಿ ಪುಣೆಗೆ ಹೊರಟಿದ್ದನು. ಅನೇಕ ಸಂಸ್ಥಾನಿಕರೂ: ಜಹಾಗೀರದಾರರೂ ದಾರಿಯಲ್ಲಿ ವೆಲ್ಲೆಸ್ಲಿಯ ಸೈನ್ಯಕ್ಕೆ ಅನೇಕ ವಿಧವಾಗಿ ಸಹಾಯ ಮಾಡಿದರು. ದಾರಿಯಲ್ಲಿ ಅವರಿಗೆ ಊಟ ಉಡಿಗೆಗಳ ವ್ಯವಸ್ಥೆ ಸಹ ನೋಡಿಕೊಂಡರು. ಎಲ್ಲರೂ ನೆರವಾಗುತ್ತಿರುವಾಗ ತಾನು ಸುಮ್ಮನೆ ಕುಳಿತುಕೊಳ್ಳುವದು ಯೋಗ್ಯವಲ್ಲವೆಂದು ಮಲ್ಲಸರ್ಜ ದೇಸಾಯಿಯು ನೂರು ಕುದುರೆಗಳನ್ನೂ ನೂರು ಜನ ಕಾಲಾಳುಗಳನ್ನೂ ಕಳಿಸಿದ್ದಲ್ಲದೆ ನದಿಯನ್ನು ದಾಟಲು ನಾವೆಗಳ ವ್ಯವಸ್ಥೆಯನ್ನು ಸಹ ಮಾಡಿದನು. ಪೇಶವೆ ಬಾಜೀರಾಯನು ಅಧಿರಾಜನಂತಿದ್ದು ಅವನಿಗೆ ಪಟ್ಟಕೊಡಿಸುವ ಸಲುವಾಗಿ ಹೊರಟ ಇಂಗ್ಲಿಷ ಸೈನ್ಯಕ್ಕೆ ಸಹಾಯ ಮಾಡುವುದೆಂದರೆ ಪೇಶವೆಗೆ ಸಹಾಯ ಮಾಡಿದಂತೆಯೆ ಎಂದು ದೇಸಾಯಿಯು ಬಗೆದಿದ್ದನು.

ಕಿತ್ತೂರ ದೇಸಾಯಿಯ ಸಲುವಾಗಿ ಪೇಶವೆಯವರು ಬಹಳೇ ವಿಶ್ವಾಸವುಳ್ಳವರಾಗಿದ್ದರು. ಬಾಜೀರಾಯ ಪೇಶವೆಯು ಬಳ್ಳಾರಿಯ ಯಾತ್ರೆಯನ್ನು ಪೂರೈಸಿಕೊಂಡು ಪುಣೆಗೆ ಬಂದ ಬಳಿಕ ಮಲ್ಲಸರ್ಜ ದೇಸಾಯಿಯನ್ನು ಕರೆಯಿಸಿಕೊಂಡನು. ಅವನ ಜೊತೆಗೆ, ಆತನ ಪ್ರಧಾನಿಯೂ-, ಸೇನಾಪತಿಯೂ ಆದ ಗುರುಸಿದ್ದಪ್ಪನೂ ಹೋಗಿದ್ದನು. ಕಿತ್ತೂರವರು ತಮ್ಮ ಸಲುವಾಗಿ ನಿಷ್ಠೆಯಿಂದ ನಡೆದುಕೊಂ-

ಡದ್ದಕ್ಕಾಗಿ ಪೇಶವೆಯು ಸಂತುಷ್ಟಿಯನ್ನು ವ್ಯಕ್ತಪಡಿಸಿದನು. ಆಗ ಅವನು ಕೆಲವು ಹೊಸ ಉಂಬಳಿಗಳನ್ನು ಕಿತ್ತೂರ ಸಂಸ್ಥಾನಕ್ಕೆ ಕೊಡಲು ಒಪ್ಪಿ ಹೊಸ ಒಪ್ಪಂದ ಮಾಡಿಕೊಂಡನು. ಮಲ್ಲಸರ್ಜ ದೇಸಾಯಿಗೆ ' ಪ್ರತಾಪರಾಯ ' ಎಂಬ ಬಿರುದನ್ನು ಕೊಟ್ಟು ಸನ್ಮಾನಿಸಿದನು. ಈ ಒಪ್ಪಂದದಿಂದ ಕಿತ್ತೂರ ದೇಸಾಯರಿಗೂ ಪೇಶವೆಯವರಿಗೂ ಹೆಚ್ಚಿನ ಸ್ನೇಹವು ಉಂಟಾಯಿತು.

ಮಲ್ಲಸರ್ಜ ದೇಸಾಯಿಯು ಪೇಶವೆಯವರ ನಿರೋಪಹೊಂದಿ ಕಿತ್ತೂರಿಗೆ ಬಂದನು. ಅವನು ಒಂದು ದಿನ ದರಬಾರ ನೆರೆಯಿಸಿ ಪೇಶವೆಯವರಿಗೂ ತಮಗೂ ಆದ ಒಪ್ಪಂದದ ಸಂಗತಿಯನ್ನು ತಿಳಿಸಿದನು. ಕಿತ್ತೂರವರೆಲ್ಲರೂ ಪರಮಸಂಭ್ರಮಗೊಂಡರು. ತಮ್ಮ ಸಂಸ್ಥಾನದಲ್ಲಿ ಮತ್ತೆ ಹಲವು ಗ್ರಾಮಗಳು ಬಂದದ್ದರಿಂದ ಎಲ್ಲರಿಗೂ ಆನಂದವಾಯಿತು. ಅಂದಿನ ದರಬಾರದಲ್ಲಿ ರಾಜಗುರುಗಳಾದ ಕಲ್ಮಠದ ಗುರುಸಿದ್ಧಯ್ಯ ಸ್ವಾಮಿಯವರೂ ಬಂದಿದ್ದರು. ಪೇಶವೆಯವರಿಂದ ಬಂದ ಬಿರುದಿನ ಸಾರ್ಥಕತೆಗಾಗಿ ' ಪ್ರತಾಪಗಡ ' ಎಂಬ ಹೆಸರಿನ ಕೋಟೆಯನ್ನು ಕಟ್ಟಿಸಬೇಕೆಂದು ಅವರು ದೇಸಾಯಿಗೆ ತಿಳಿಸಿದರು. ಅವರ ಸೂಚನೆಯು ಎಲ್ಲರಿಗೂ ಸಮರ್ಪಕವೆನಿಸಿತು. ಕೂಡಲೆ ಹೊಸ ಕೋಟೆಯನ್ನು ಕಟ್ಟಿಸುವ ವ್ಯವಸ್ಥೆ ಮಾಡುವದಕ್ಕೆ ಗುರುಸಿದ್ಧಪ್ಪ ಪ್ರಧಾನಿಗೆ ದೊರೆಯ ಆಜ್ಞೆಯಾಯಿತು. ಈ ಒಪ್ಪಂದವಾದ ಬಳಿಕ ದೇಸಾಯಿಯು ನಿಶ್ಚಿಂತೆಯಿಂದ ತನ್ನ ಸಂಸ್ಥಾನವನ್ನು ಆಳುವಂತಾಯಿತು. ಅವನು ಪೇಶವೆಯವರಿಗೆ ಕಪ್ಪ ಕೊಡುವ ಮಟ್ಟಿಗೆ ಬಾಧ್ಯನಿದ್ದನಲ್ಲದೆ, ರಾಜ್ಯಕಾರ್ಯದಲ್ಲಿ ಅವನು ಸರ್ವತಂತ್ರ ಸ್ವತಂತ್ರನಾಗಿಯೆ ವ್ಯವಹರಿಸುತ್ತಿದ್ದನು.

೬

ಮಲ್ಲಸರ್ಜ ದೊರೆಯು ಆಗಿನ ಸಂಸ್ಥಾನಿಕರಲ್ಲಿ ಒಳ್ಳೆಯ ದೊರೆ. ಸ್ವಾತಂತ್ರ್ಯಪ್ರೇಮಿಯೂ ಸ್ವಾಭಿಮಾನಿಯೂ ಆಗಿದ್ದನು. ಇವನು ಎಲ್ಲರೊಡನೆ ಮೈತ್ರಿ ಬೆಳಿಯಿಸಬೇಕೆನ್ನುತ್ತಿದ್ದರೂ ಇವನಿಗೆ ಹೊರಗೂ ಒಳಗೂ ಹಗೆಗಳು ಬಹಳವಾಗಿದ್ದರು. ಇವನು ಸ್ವತಂತ್ರ ರಾಜನಂತೆ ವರ್ತಿಸುವದು ಕೆಲವರಿಗೆ ಸಹನವಾಗುತ್ತಿರಲಿಲ್ಲ. ಇವನ ಬಗ್ಗೆ ಕೆಲವು ದೇಸಾಯಿಯರು ಪೇಶಯುವರಲ್ಲಿಗೆ ಹೋಗಿ ಚಾಡಿ ಹೇಳುತ್ತಿದ್ದರು. ಶೇಗುಣಸಿಯ ಅಲ್ಲಪ್ಪಗೌಡನಂತೂ ದೇಸಾಯಿಗೆ ಆಜನ್ಮ ವೈರಿಯಾಗಿದ್ದನು. ಈ ಹೊರಗಿನ ಹಗೆಗಳಲ್ಲದೆ ಒಲಗದಲ್ಲಿ ಕೂಡ ಇವನ ವಿರುದ್ಧವಾಗಿ ಅನೇಕ ಪ್ರಬಲ ಸಂಚುಗಾರರಿದ್ದರು. ಕಾರಭಾರಿ ವೆಂಕಟರಾಯ, ಕೊಣ್ಣೂರ ಮಲ್ಲಪ್ಪ, ಹುರಕಡ್ಲಿ ವೀರಸಂಗಪ್ಪ, ಕೋಟೆಯ ಸಕ್ಷಕ ಶಿವಬಸಪ್ಪ ಮೊದಲಾದವರು ಒಳಗಿಂದೊಳಗೆ ವೈರಿಗಳಿಗೆ ಸಹಾಯಕರಾಗಿ ಹೊರಹೊರಗೆ ನಿಷ್ಠೆಯನ್ನು ತೋರಿಸುತ್ತಿದ್ದರು. ಇವರಲ್ಲಿ ಕೆಲವರ ಮೇಲೆ ಚೆನ್ನಮ್ಮನು ಸಂಶಯಗೊಂಡು ದೇಸಾಯಿಗೆ ತಿಳಿಸಿದ್ದರೂ, ಬೆಳ್ಳಗಿದ್ದದ್ದನ್ನು ಹಾಲೆಂದು ನಂಬುವ ಅವನು, ಹೆಂಡತಿಯ ಸೂಚನೆಗಳನ್ನು ಅಲ್ಲಗಳೆದಿದ್ದನು. ಆದರೂ ಅವರಲ್ಲಿ ಕೆಲವರ ಬಗ್ಗೆ ಎಚ್ಚರಿಕೆಯಿಂದ ನಡೆದುಕೊಳ್ಳುತ್ತಿದ್ದನು. ಪ್ರಧಾನಿ ಗುರುಸಿದ್ಧಪ್ಪನವರು ಅತ್ಯಂತ ಸ್ವಾಮಿನಿಷ್ಠ ಸೇವಕನಾಗಿದ್ದು, ಅವನ ವರ್ಚಸ್ಸು ಬಹಳವಾಗಿತ್ತು. ಆದುದರಿಂದ ಉಳಿದ ಕರ್ಮಚಾರಿಗಳ ಆಟ ಬಹಳವಾಗಿ ಸಾಗುತ್ತಿರಲಿಲ್ಲ. ಆದರೂ ಸಮಯಸಾಧಿಸಿ ಒಂದೊಂದು ಕಾರ್ಯವನ್ನು ಆ ವಿದ್ರೋಹಿಗಳು ಸಾಧಿಸುತ್ತಿದ್ದರು. ಸಂಗೊಳ್ಳಿಯ ರಾಯಣ್ಣ, ಬಾಲಣ್ಣ ಗಜವೀರ ಮೊದಲಾದ ವೀರರು ಸೈನ್ಯದಲ್ಲಿದ್ದುಕೊಂಡು ಅತ್ಯಂತ ದಕ್ಷತೆಯಿಂದ ಸ್ವಾಮಿಕಾರ್ಯ ಸಾಧಿ

ಸುತ್ತಿದ್ದರು. ಪ್ರಸಂಗದಲ್ಲಿ ಉಪಯೋಗವಾಗಲೆಂದು ನಾಗರಿಕರಿಗೆ ಕೂಡ ಸೈನಿಕ ಶಿಕ್ಷಣವನ್ನು ಚೆನ್ನಮ್ಮರಾಣಿಯು ಇವರಿಂದ ಕೊಡಿಸು ತ್ತಿದ್ದಳು. ಕಿತ್ತೂರ ಸಂಸ್ಥಾನದ ಸ್ವಾಮಿನಿಷ್ಠ ಪ್ರಜಾಜನರು ಹಿಂದಿನ ಅನೇಕ ಕಾಳಗಗಳಲ್ಲಿ ಜೀವದೊರೆದು ಕಾದಿ ಹೆಸರುವಾಸಿಗಳಾಗಿದ್ದರು.

ಕಾರಭಾರಿಗಳಾದ ಕೊಣ್ಣೂರ ಮಲ್ಲಪ್ಪ ಹಾಗು ವೆಂಕಟರಾಯ ಮೊದಲಾದ ಕರ್ಮಚಾರಿಗಳು ಸ್ವಾಮಿನಿಷ್ಠರಂತೆ ನಟಿಸುತ್ತಿದ್ದರೂ ಅವರು ಪರಮಸ್ವಾರ್ಥಿಗಳಾಗಿದ್ದರು. ಪ್ರಸಂಗವೊದಗಿದರೆ ವೈರಿಗ ಳಿಗೆ ಸಹಾಯ ಮಾಡುವುದಕ್ಕೂ ಹಿಂದೆ-ಮುಂದೆ ನೋಡುವವರ ಲ್ಲೆಂಬ ಅನುಮಾನವು ಚೆನ್ನಮ್ಮರಾಣಿಗೂ, ದೇಸಾಯಿಗೂ, ಗುರು ಸಿದ್ಧಪ್ಪ ಪ್ರಧಾನಿಗೂ ತಿಳಿದಿತ್ತು. ಆದರೆ ಆ ಜನರು ವರ್ಚಸ್ವಿಗಳಾ ಗಿದ್ದುದರಿಂದ ಅವರಿಗೆ ಏನೂ ಶಾಸನ ಮಾಡಲಿಕ್ಕೆ ಬಾರದಂತಿತ್ತು. ಆದರೆ ಅವರ ಚಲನವಲನಗಳ ಕಡೆಗೆ ಚೆನ್ನಮ್ಮರಾಣಿಯು ಬಹಳೇ ಲಕ್ಷ್ಯಗೊಡುತ್ತಿದ್ದಳು.

ದೇಸಾಯಿಯು ರುದ್ರಮ್ಮರಾಣಿಯ ಮಗನಾದ ಶಿವಲಿಂಗರುದ್ರ ಸರ್ಜನ ಹಾಗೂ ಚೆನ್ನಮ್ಮರಾಣಿಯ ಮಗ ಶಿವಬಸವರಾಜನ ವಿವಾಹ ವನ್ನು ನೆರವೇರಿಸಿದನು. ಶಿವಲಿಂಗರುದ್ರ ಸರ್ಜನ ಹೆಂಡತಿಯ ಹೆಸರು **ವೀರವ್ವರಾಣಿ,** ಶಿವಬಸವರಾಜನ ಹೆಂಡತಿಯ ಹೆಸರು **ಜಾನಕೀ ಬಾಯಿ**ಯೆಂದಿತ್ತು. ಶಿವಬಸವರಾಜನು ಶಿವಲಿಂಗರುದ್ರಸರ್ಜನೊಡನೆ ಬಹಳೇ ಪ್ರೇಮದಿಂದಿದ್ದು, ಯಾವಾಗಲೂ ಅವನ ಅಂಗರಕ್ಷಕನಾ- ಗಿಯೇ ಇರುತ್ತಿದ್ದನು. ರಾಮನೊಡನೆ ಲಕ್ಷ್ಮಣನು ಹೇಗೋ ಹಾಗೆ ಶಿವಲಿಂಗರುದ್ರ ಸರ್ಜನಿಗೆ ಶಿವಬಸವರಾಜನು.

ಚೆನ್ನಮ್ಮರಾಣಿಯು ಅತ್ಯಂತ ಸುಖದಿಂದ ಕಾಲಕಳೆಯುತ್ತಿರು ವಾಗ ಅವಳ ಮಗನಾದ ಶಿವಬಸವರಾಜನು ಅಕಾಲ ಮೃತ್ಯುವಶ

ನಾದನು. ಪುತ್ರಶೋಕದಿಂದ ಚೆನ್ನಮ್ಮರಾಣಿಯು ಬಹಳೇ ಗಾಸಿಗೊಂಡಳು! ಬಾಲವಿಧವೆಯಾದ ಜಾನಕೀಬಾಯಿಯನ್ನು ನೋಡಿ ಅವಳು ಬಹಳೇ ಕೊರಗುತ್ತಿದ್ದಳು. ದಿನಗಳೆದ ಹಾಗೆ ಅವಳು ಪುತ್ರಶೋಕವನ್ನು ಮರೆತು ಕರ್ತವ್ಯದ ಕಡೆಗೆ ಲಕ್ಷ್ಯಗೊಡತೊಡಗಿದಳು. ಶಿವಲಿಂಗರುದ್ರ ಸರ್ಜನನ್ನೇ ತನ್ನ ಮಗನೆಂದು ಭಾವಿಸಿದಳು. ರುದ್ರಮ್ಮನಾದರೂ ತನ್ನ ಮಗನನ್ನು ನೋಡಿ ಪುತ್ರಶೋಕವನ್ನು ಮರೆಯಲು ಬೋಧಿಸುತ್ತಿದ್ದಳು. ಕಲ್ಮಠದ ಗುರುಸಿದ್ಧಸ್ವಾಮಿಗಳು ಆಗಿಂದಾಗ ಅರಮನೆಗೆ ಬಂದು, ಚೆನ್ನಮ್ಮರಾಣಿಯನ್ನು ಸಮಾಧಾನಪಡಿಸಿ ಅವಳ ಮನಸ್ಸನ್ನು ಕರ್ತವ್ಯದ ಕಡೆಗೆ ಎಳೆಯಲು ಪ್ರಯತ್ನಿಸುತ್ತಿದ್ದರು. ಕಿತ್ತೂರಿನ ಗೌರವವನ್ನು ಕಾಯ್ದುಕೊಳ್ಳುವದಕ್ಕಾಗಿಯೂ, ಕಿತ್ತೂರಿನ ಪ್ರಜೆಗಳು ಸುಖಶಾಂತಿಯಿಂದ ಬಾಳುವದಕ್ಕಾಗಿಯೂ ಚೆನ್ನಮ್ಮರಾಣಿಯು ಬಹಳೇ ಪ್ರಯತ್ನ ಮಾಡುತ್ತಿದ್ದಳು. ಬರಬರುತ್ತ ರುದ್ರಮ್ಮರಾಣಿಯು ರಾಜಕಾರಣದಲ್ಲಿ ಏನೂ ಮನಸ್ಸು ಹಾಕದೆ ಕೇವಲ ಪಾರಮಾರ್ಥ ಸಾಧನೆಯಲ್ಲಿ ಕಾಲಕಳೆಯಹತ್ತಿದಳು. ಅವಳು ರಾಜಗುರುಗಳಾದ ಕಲ್ಮಠ ಸ್ವಾಮಿಗಳ ಸನ್ನಿಧಾನಕ್ಕೆ ಹೋಗಿ ಅವರಿಂದ ಪಾರಮಾರ್ಥದ ಉಪದೇಶ ಹೊಂದುತ್ತಿದ್ದಳು. ಮಲ್ಲಸರ್ಜ ದೇಸಾಯಿಯಾದರೂ ಬಹುಮಟ್ಟಿಗೆ ಚೆನ್ನಮ್ಮರಾಣಿಯ ಮೇಲೆಯೆ ರಾಜ್ಯಭಾರವನ್ನು ವಹಿಸಿಕೊಟ್ಟಂತಾಗಿತ್ತು.

ಕಿತ್ತೂರಿನ ಸೈದನ ಸಾಹೇಬ ಅಮಟೂರ ಎಂಬವನು ಮುಸ–ಲ್ಮಾನರಲ್ಲಿ ಪ್ರಮುಖನಾಗಿದ್ದನು. ಊರಲ್ಲಿಯ ಮಸೀದೆಯು ಬಿದ್ದು ಹೋಗಿತ್ತು. ಅದನ್ನು ಹೊಸದಾಗಿ ಕಟ್ಟುವದಕ್ಕಾಗಿ ಸಹಾಯ ಮಾಡಬೇಕೆಂದು ಅವನು ದೇಸಾಯಿಯನ್ನು ಕೇಳಿದನು. ಆದರೆ ಕೊಣ್ಣೂರ ಮಲ್ಲಪ್ಪಶೆಟ್ಟಿ, ವೆಂಕಟರಾಯರು ಅವನಿಗೆ ಸಹಾಯ ಮಾಡುವದನ್ನು

ವಿರೋಧಿಸಿದರು. ಮಲ್ಲಸರ್ಜ ದೇಸಾಯಿಯು ಅವನಿಗೆ ಮಸೀದೆ ಕಟ್ಟಲು ಧನಸಹಾಯ ಮಾಡಬೇಕೆಂದಿದ್ದರೂ ಮುಖ್ಯ ಕಾರಭಾರಿಗಳ ವಿರೋಧಕ್ಕಾಗಿ ಸುಮ್ಮನಿರಬೇಕಾಯಿತು. ಪ್ರಧಾನಿ ಗುರುಸಿದ್ಧಪ್ಪನಾದರೂ ನಿರುಪಾಯನಾದನು. ನಿರಾಶೆ ಹೊಂದಿದ ಅಮಟೂರ ಸೈದನಸಾಹೇಬನು ಚೆನ್ನಮ್ಮರಾಣಿಯ ಬಳಿಗೆ ಬಂದು ಓಲಗದಲ್ಲಿ ನಡೆದ ಸಂಗತಿಯನ್ನು ತಿಳಿಸಿ, ತನಗೆ ನೆರವಾಗಬೇಕೆಂದು ಪರಿಪರಿಯಿಂದ ಬೇಡಿಕೊಂಡನು.

ಮಸೀದೆಯನ್ನು ಕಟ್ಟಿಸಲು ಸಹಾಯ ಮಾಡಲು ಕಾರಭಾರಿಗಳು ನಿರಾಕರಿಸಿದ್ದನ್ನು ಕೇಳಿ ಅವಳು ವೆಂಕಟರಾಯರನ್ನೂ, ಮಲ್ಲಪ್ಪಸೆಟ್ಟರನ್ನೂ ಅರಮನೆಗೆ ಕರೆಯಿಸಿಕೊಂಡಳು. ಪ್ರಧಾನಿ ಗುರುಸಿದ್ಧಪ್ಪನೂ ಬಂದಿದ್ದನು. ಆಗ ಅವಳು ಮಲ್ಲಪ್ಪಸೆಟ್ಟರನ್ನು ಕುರಿತು—"ಕಾರಭಾರಿಗಳೆ, ಸೈದನಸಾಹೇಬನ ಮಸೀದೆಯು ಪೂರಾ ಬಿದ್ದು ಹೋಗಿದೆ. ನಮ್ಮ ರಾಜಧಾನಿಯಲ್ಲಿ ಮುಸಲ್ಮಾನರು ವಾಸಿಸುತ್ತಾರೆ. ಅವರಿಗೆ ಮಸೀದೆ ಬೇಡವೆ ? ನಮಗೆ ದೇವತಾಮಂದಿರವು ಹೇಗೋ ಹಾಗೆ ಅವರಿಗೆ ಮಸೀದೆ. ದೇವಮಂದಿರಗಳನ್ನು ಕಟ್ಟಲು ನೀವು ಸಂಸ್ಥಾನದ ಬೊಕ್ಕಸದಿಂದ ಹಣ ಕೊಟ್ಟಿಲ್ಲವೆ ? ಮುಸಲ್ಮಾನರೂ ನಮ್ಮ ಪ್ರಜೆಗಳೇ. ಅವರಿಗೆ ಈ ಕೆಲಸದಲ್ಲಿ ಸಹಾಯ ಮಾಡದಿರುವುದು ಪ್ರಜಾದ್ರೋಹವೆನಿಸಿಕೊಳ್ಳುವದು."

ಚೆನ್ನಮ್ಮರಾಣಿಯ ಮಾತು ಕೇಳಿ ಮಲ್ಲಪ್ಪಸೆಟ್ಟಿ ಬಲು ಗಂಭೀರವಾಗಿ— "ರಾಣೀಸಾಹೇಬರೆ, ನಾವು ಮುಸಲ್ಮಾನರಿಗೆ ಸಹಾಯ ಮಾಡುವದರಿಂದ ನಾವು ನಮ್ಮ ವೈರಿಗಳಿಗೆ ಸಹಾಯಮಾಡಿದಂತಾಗುವದು. ಮುಸಲ್ಮಾನರು ಯಾವಾಗಲೂ ನಮ್ಮ ವೈರಿಗಳು. ಮುಸಲ್ಮಾನರಿಂದ ಹಿಂದುಗಳು ಬಹಳೇ ನೊಂದುಕೊಂಡಿಲ್ಲವೆ ? ಅವರು

ನಮ್ಮಲ್ಲಿ ಎಷ್ಟೋ ಶತಮಾನಗಳಿಂದ ವಾಸಿಸಿದ್ದರೂ ಅವರು ನಮ್ಮಲ್ಲಿ ಪ್ರೇಮ ವಿಶ್ವಾಸಗಳನ್ನು ತಳೆಯದೆ ವೈರವನ್ನೇ ಮಾಡುತ್ತಿದ್ದಾರೆ. ಟೀಪೂ ಸುಲ್ತಾನನು ನಮಗೆ ಕೊಟ್ಟ ತೊಂದರೆಗಳನ್ನು ನೀವು ನೋ-ಡಿಲ್ಲ. ನೀವು ಇಲ್ಲಿಗೆ ಬರುವಷ್ಟರಲ್ಲಿ ಅವು ಮುಗಿದಿದ್ದವು. ಒಟ್ಟಿನ ಮೇಲೆ ನಾವು ಮುಸಲ್ಮಾನರಿಗೆ ಸಹಾಯ ಮಾಡುತ್ತ ಹೋದರೆ ಅವರು ನಮ್ಮ ಉಪಕಾರ ಸ್ಮರಿಸದೆ ನಮ್ಮ ವೈರವನ್ನೇ ಮಾಡುತ್ತಾರೆ."

" ರಾಣೀಸರ್ಕಾರ್, ಮುಸಲ್ಮಾನರು ನಮ್ಮ ದೇಶಕ್ಕೆ ಮೃತ್ಯು ಸ್ವರೂಪಿಗಳು. ಅವರಿಗೆ ಉಪಕಾರ ಮಾಡುವದೆಂದರೆ ಹಾವಿಗೆ ಹಾಲೆರೆದಂತೆ ! " ಎಂದು ವೆಂಕಟರಾಯನು ಹೇಳಿದನು.

" ಕಾರಭಾರಿಗಳೆ !" ಚೆನ್ನಮ್ಮ ರಾಣಿಯು ಗಾಂಭೀರ್ಯದಿಂದ, " ಮುಸಲ್ಮಾನರಿಂದ ನಾವು ಗಾಸಿಯಾಗಿರಬಹುದು. ಆದರೆ ಈಗಿನ ವಿಷಯವು ಆ ರಾಜಕಾರಣಕ್ಕೆ ಸಂಬಂಧಿಸಿದ್ದಲ್ಲ. ಯಾವನೊಬ್ಬನು ಹಿಂದುಗಳೊಡನೆ ವೈರ ಕಟ್ಟಿಕೊಂಡರೆ ಇಡೀ ಮುಸಲ್ಮಾನರೇ ವೈರಿಗಳೆಂದು ತಿಳಿದುಕೊಳ್ಳುವದು ತಪ್ಪು. ಸೈದನಸಾಬನು ನಮ್ಮ ಪ್ರಜೆಯು. ನಾವು ಸೈದನಸಾಹೇಬನ ಮನೆತನಕ್ಕೆ ಸಹಾಯ ನೀಡುತ್ತಿರುವುದಿಲ್ಲ. ಅವನು ದೇವತಾಕಾರ್ಯಕ್ಕಾಗಿ ಯಾಚಿಸುತ್ತಿರುವನೆಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. ಯಾವನೊಬ್ಬನು ದೇಶದ್ರೋಹಿಯಾದರೆ ಅವನು ತನ್ನ ಕರ್ಮದ ಫಲವನ್ನು ಅನುಭವಿಸುವನು. ಕೆಲವು ಮುಸಲ್ಮಾನರು ನಮ್ಮ ವೈರಿಗಳಾದರೆಂದು ಇಡೀ ಜನಾಂಗವನ್ನೇ ನಾವು ಶತ್ರುವೆಂದು ಭಾವಿಸುವದು ತಪ್ಪು. "

" ರಾಣಿಯವರೆ, ನೀವು ಏನು ಹೇಳಿದರೂ ನಮಗೆ ಸಮ್ಮತಿಯಿಲ್ಲ. ಇದಕ್ಕೂ ಮೀರಿ ನೀವು ಬೇಕಾದಷ್ಟು ಸಹಾಯ ಮಾಡಬಹುದು. "

ಮಲ್ಲಪ್ಪ ಸೆಟ್ಟಿಯು ಹೀಗೆ ನುಡಿದ ಬಳಿಕ, ವೆಂಕಟರಾಯನು, " ನಿಮ್ಮ ಬೊಕ್ಕಸ, ನೀವು ಬೇಕಾದಷ್ಟು ಹಣವನ್ನು ಮಸೀದಿಗೆ ಕೊ-ಡಿರಿ. ನಿಮ್ಮ ಮನಸ್ಸಿನಂತೆ ನೀವು ನಡೆಯುವುದಾದರೆ ಓಲಗದಲ್ಲಿ ನಾವೇಕೆ ಬೇಕು ? " ವೆಂಕಟರಾಯನು ಆವೇಶದಿಂದ ಹೇಳಿದನು.

ಸೈದನಸಾಹೇಬನ ಕಣ್ಣುಗಳಲ್ಲಿ ನೀರು ಬಂದವು. ಗುರುಸಿದ್ದಪ್ಪ ಪ್ರಧಾನಿಯು ಉಸಿರ್ಗರೆದನು. ಆಗ ಚೆನ್ನಮ್ಮರಾಣಿಯು— " ಸೈದನಸಾಹೇಬ, ನೀನು ದುಃಖಿಸಬೇಡ. ದೇವತಾಕಾರ್ಯವು ನಿಲ್ಲುವದಿಲ್ಲ. ನಿನಗೆ ನಾನು ನನ್ನ ಖಾಸಾ ಬೊಕ್ಕಸದಿಂದ ಹತ್ತು ಸಾವಿರ ರೂಪಾಯಿ ಕೊಡುವೆನು. ನೀನು ಈ ಹಣದಿಂದ ಮಸೀದೆಯ ಕಾರ್ಯವನ್ನು ಪೂರ್ತಿಗೊಳಿಸು. "

ಕೊಣ್ಣೂರ ಮಲ್ಲಪ್ಪ ಸೆಟ್ಟಿಯೂ, ವೆಂಕಟರಾಯನೂ ಬೆರಗಾದರು; ಖಾಸಾ (ಸ್ವಂತದ) ಬೊಕ್ಕಸದ ಹಣದ ಬಗ್ಗೆ ಇವರಿಗೆ ಏನೂ ಮಾತಾಡಲು ಅಧಿಕಾರವಿರಲಿಲ್ಲ. ಅವರು ರಾಣಿಯ ನಿರೋಪಹೊಂದಿ ಅಲ್ಲಿಂದ ಕಾಲ್ದೆಗೆದರು. ಪ್ರಧಾನಿ ಗುರುಸಿದ್ಧಪ್ಪನಿಗೆ ಸಮಾಧಾನವಾಯಿತು.

ಸೈದನ ಸಾಹೇಬನು ರಾಣಿಗೆ ಹೃತ್ಪೂರ್ವಕವಾಗಿ ಅಭಿನಂದಿಸಿ ಅಲ್ಲಿಂದ ತೆರಳಿದನು. ಪ್ರಧಾನಿಯೂ ತನ್ನ ಮನೆಗೆ ತೆರಳಿದನು. ತಮ್ಮ ಯೋಜನೆಯೇ ಯಶಸ್ವಿಯಾಯಿತೆಂದು ಮಲ್ಲಪ್ಪಸೆಟ್ಟಿಯೂ, ವೆಂಕಟರಾಯನೂ ಆನಂದಬಟ್ಟು ತಮ್ಮ ಮನೆಗಳನ್ನು ತಲುಪಿದರು.

೭

ಶ್ರೀಮಂತ ಪೇಶವೆ ಎರಡನೆಯ ಬಾಜೀರಾಯನು ಸೊಂಡೂರ ಕಾರ್ತಿಕಸ್ವಾಮಿಯ ದರ್ಶನ ತೆಗೆದುಕೊಂಡು ಮಾರ್ಗದಲ್ಲಿ ಎಡೂರಿನಲ್ಲಿ ಬೀಡು ಬಿಟ್ಟಿದ್ದನು. ಅವನು ಪುಣೆಗೆ ಹೊರಡುವ ಮುಂಚೆ ಶೇಗುಣಸಿಯ ಅಲ್ಲಪ್ಪಗೌಡನೂ ಇನ್ನೂ ಕೆಲವು ಜನರೂ ಮಲ್ಲಸರ್ಜನ ವಿರುದ್ಧವಾಗಿ ಏನೇನೋ ದೂರ ಹೇಳಿದರು. ಮಲ್ಲಸರ್ಜ ದೇಸಾಯಿಗೆ ಈ ಹೊತ್ತಿಗೆ ರಾಜ್ಯದ ಹೊರಗೂ ಒಳಗೂ ವೈರಿಗಳು ಬೆಳೆದಿದ್ದರು. ಅವರು ಪೇಶವೆಯ ಮನಸ್ಸು ಕಲುಷಿತಗೊಳಿಸಿ, ದೇಸಾಯಿಗೆ ತೊಂದರೆಯುಂಟಾಗುವಂತೆ ಮಾಡುವದಕ್ಕಾಗಿ ದೀರ್ಘ ಸಾಹಸ ನಡೆಯಿಸಿದ್ದನು. ಮಲ್ಲಸರ್ಜ ದೇಸಾಯಿಯ ಏಳ್ಗೆಯನ್ನು ನೋಡಲಾರದೆ ಹೊಟ್ಟೆಕಿಚ್ಚು ಪಡುವ ಜನರೂ ಹಾಗೂ ಸ್ವಾರ್ಥಸಾಧಕರೂ ಈ ಬಗ್ಗೆ ತುಂಬಾ ಪರಿಶ್ರಮಪಡತೊಡಗಿದ್ದರು. ಎಡೂರಿನಲ್ಲಿ ಪೇಶವೆಯ ಮುಂದೆ ವೈರಿಗಳು ಹೇಳಿದ ದೂರಿನ ಸಂಗತಿಗಳು ದೇಸಾಯಿಗೆ ತಿಳಿದವು. ಅವನು ಓಲಗದಲ್ಲಿ ವೈರಿಗಳ ಈ ಚಟುವಟಿಕೆಗಳ ಬಗ್ಗೆ ಚರ್ಚೆ ನಡೆಯಿಸಿದನು.

“ ಪ್ರಭುಗಳೆ, ಇತ್ತೀಚೆಗೆ ನಮಗೆ ಹೊರಗಿನ ಶತ್ರುಗಳು ಕಡಿಮೆಯಾಗಿದ್ದರು. ಆದರೆ ನಮ್ಮ ಓಲಗದಲ್ಲಿಯ ಕೆಲವು ಸ್ವಾರ್ಥಿಗಳು ಸಂಸ್ಥಾನದ ಗುಪ್ತ ಸಂಗತಿಗಳನ್ನು ಕೂಡ ಬೈಲಿಗೆಳೆದಿದ್ದಾರೆ. ಗುಪ್ತ ರಾಜ್ಯಕಾರ್ಯಗಳು ಕೂಡ ಪೇಶವೆಯವರಿಗೆ ತಿಳಿಯಬೇಕಾದರೆ ಓಲಗದ ಕರ್ಮಚಾರಿಗಳ ಕೈವಾಡವು ಇರಲಿಕ್ಕೆ ಬೇಕು. ಯಾರನ್ನು ನಂಬಬೇಕೆಂಬುದೇ ತಿಳಿಯದಾಗಿದೆ. ಮೇಲೆ ಮೇಲೆ ನಿಷ್ಠೆಯನ್ನು ತೋರಿಸುತ್ತ, ಒಳಗಿಂದೊಳಗೆ ಕುತಂತ್ರವನ್ನು ಮಾಡುವ ಜನರು ಓಲಗದಲ್ಲಿರುವವರೆಗೆ ನಮಗೆ ಗಂಡಾಂತರಗಳು ಒದಗತಕ್ಕವುಗಳೇ! ”

ಗುರುಸಿದ್ಧಪ್ಪ ಪ್ರಧಾನಿಯ ಮಾತುಗಳು ಮಲ್ಲಪ್ಪಸೆಟ್ಟಿ, ವೆಂಕಟರಾಯರ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿದವು. ಆಗ ವೆಂಕಟರಾಯನು ಒಳ್ಳೇ ನಿಷ್ಠಾವಂತನಂತೆ ಅಭಿನಯಿಸುತ್ತ— " ದೊರೆಗಳೆ, ನಮ್ಮ ಪ್ರಧಾನಿಗಳು ಮಹಾ ಸಂಶಯ ಪ್ರಕೃತಿಯವರು. ಅವರ ನಿಷ್ಠೆಯ ಬಗ್ಗೆ ನಮ್ಮ ಸಂಸ್ಥಾನದಲ್ಲಿ ಯಾರಿಗೂ ಸಂದೇಹವಿಲ್ಲ. ಆದರೆ ಅವರು ತಮ್ಮ ಸ್ವಭಾವಕ್ಕನುಗುಣವಾಗಿ ಹಾಗೆ ಮಾತಾಡುತ್ತಾರೆ. ಅವರ ಮಾತಿನಲ್ಲಿ ಹುರುಳಿಲ್ಲ. ನಮ್ಮ ಓಲಗದಲ್ಲಿ ಸ್ವಾಮಿದ್ರೋಹ ಮಾಡುವ ಜನರು ಯಾರೂ ಇಲ್ಲೆಂದು ನಾನು ಕೈಯೆತ್ತಿ ಹೇಳುತ್ತೇನೆ. "

" ನಮ್ಮ ವೆಂಕಟರಾಯರು ಅತ್ಯಂತ ಮೇಧಾವಿಗಳು. ಅವರು ಎಲ್ಲರ ಗುಣಶೀಲಗಳನ್ನು ಬಹಳೇ ಸೂಕ್ಷ್ಮವಾಗಿ ಪರೀಕ್ಷಿಸಿಕೊಂಡಿರುತ್ತಾರೆ. ಗುರುಸಿದ್ಧಪ್ಪ ಪ್ರಧಾನಿಯವರು ವೆಂಕಟರಾಯ ಕಾರಭಾರಿಗಳು ಹೇಳಿದಂತೆ ಸಂಶಯ ಪ್ರಕೃತಿಯವರು ಎಂಬುದನ್ನು ನಾನೂ ಮನವರಿಕೆಮಾಡಿಕೊಂಡಿದ್ದೇನೆ. " ಎಂದು ಮಲ್ಲಪ್ಪಸೆಟ್ಟಿಯು ಆತ್ಮೀಯತೆಯಿಂದ ನುಡಿದನು.

" ನನ್ನ ಸ್ವಭಾವವು ಸಂಶಯಗ್ರಸ್ತವಾಗುವಂತೆ ನಡೆಯುತ್ತಿರುವ ಘಟನೆಗಳು ಒಂದಿಲ್ಲೊಂದು ದಿನ ಬೈಲಿಗೆ ಬರದೆ ಇರಲಾರವು. ನೀವಿಬ್ಬರು ಕಾರಭಾರಿಗಳು ಮಾತ್ರ ಸಂಸ್ಥಾನದ ಸೇವೆಯನ್ನು ಹೇಗೆ ಸಲ್ಲಿಸುತ್ತಿರುವಿರೆಂಬ ಬಗ್ಗೆ ನನಗೆ ನಿಸ್ಸಂಶಯವಾದ ನಂಬಿಗೆಯುಂಟಾಗಿದೆ. ಮುಂದೆ ಎಲ್ಲರಿಗೂ ನಂಬಿಗೆಯಾಗುವದು. "

" ಇದರ ಅರ್ಥವೇನು ಪ್ರಧಾನಿಗಳೆ ? " ಸೆಟ್ಟಿಯು ಕೇಳಿದನು.

" ನಮ್ಮ ಸ್ವಾಮಿನಿಷ್ಠೆಯ ಬಗ್ಗೆ ಸಂದೇಹವೆ ? " ವೆಂಕಟರಾಯನು ಪ್ರಶ್ನೆ ಮಾಡಿದನು.

ಇನ್ನು ವಾದವು ಬೆಳೆಯುವದೆಂದು ತಿಳಿದು, ಮಲ್ಲಸರ್ಜ ದೊರೆಯು ಎಲ್ಲರನ್ನೂ ಸಮಾಧಾನಗೊಳಿಸುವ ಉದ್ದೇಶದಿಂದ, " ಈಗಿನ ಸಂದರ್ಭದಲ್ಲಿ ಮುಖ್ಯ ವಿಷಯವನ್ನು ಬದಿಗಿರಿಸಿ, ಬೇರೆ ವಿಷಯದ ಬಗ್ಗೆ ವಾದ ಹೂಡುವದು ಅನಾವಶ್ಯಕವು. ಯಾರ ಯಾರ ನಿಷ್ಠೆಯು ಎಂಥದೆಂಬದನ್ನು ಕಾಲವೇ ಒರೆಗೆ ಹಚ್ಚುವದು. ಹಿಂದೆ ಯಾವ ಪ್ರಮಾದಗಳಾದರೂ ಘಟಿಸಿದ್ದರೆ, ಅವುಗಳ ಬಗ್ಗೆ ಪಶ್ಚಾತ್ತಾಪಗೊಂಡು ಮುಂದೆಯಾದರೂ ನಿಷ್ಠರಾಗಿ ಉಳಿದರೆ ಸಂಸ್ಥಾನದ ಕಲ್ಯಾಣವಾಗುವದಲ್ಲದೆ ನಮ್ಮ ನಿಮ್ಮೆಲ್ಲರ ಹಿತವೂ ಆಗುವದು. ಯಾರೂ ಸ್ವಾರ್ಥಿಗಳಾಗಬೇಡಿರಿ, ಕೀರ್ತಿಗೆ ಕಲಂಕ ಹತ್ತುವಂತೆ ಯಾರೂ ವರ್ತಿಸಬಾರದೆಂದು ನಾನು ನಿಮ್ಮೆಲ್ಲರಿಗೆ ಬೇಡಿಕೊಳ್ಳುವೆನು."

ಸಿಟ್ಟಿಗೆದ್ದ ಮಲ್ಲಪ್ಪಸೆಟ್ಟಿಯೂ, ವೆಂಕಟರಾಯನೂ ಸಮಾಧಾನಗೊಂಡರು. ಆಗ ವೆಂಕಟರಾಯನು, " ಸ್ವಾಮಿದ್ರೋಹದ ಕೃತ್ಯವನ್ನೆಸಗಿದವರನ್ನು ಆನೆಯ ಕಾಲಿಗೆ ಕಟ್ಟಿಸಿ ಕೊಲ್ಲಿಸಿರಿ " ಎಂದು ಆವೇಶದಿಂದ ನುಡಿದನು.

" ಈಗ ಈ ಈರ್ಷೆಯ ಮಾತುಗಳು ಸಾಕು. " ಎಂದು ಮಲ್ಲಸರ್ಜ ದೊರೆಯು ನುಡಿದು, " ಯಾರೋ ಕುಹಕಿಗಳು ನನ್ನ ವಿಷಯವಾಗಿ ಪೇಶವೆಯವರಿಗೆ ದೂರು ಹೇಳಿದ್ದಾರೆ. ಈಗ ಶ್ರೀಮಂತರು ಕೃಷ್ಣಾತೀರದಲ್ಲಿಯ ಎಡೂರಲ್ಲಿ ವಸತಿ ಮಾಡಿದ್ದಾರೆ. ನಾನು ಅವರ ಸಂಶಯ ನಿವಾರಣೆಗೆ ಯಾವ ಉಪಾಯ ಮಾಡಬೇಕೆಂದು ನಾನು ನಿಮ್ಮ ಸಲಹೆ ಕೇಳುತ್ತೇನೆ. ಪ್ರಧಾನಿಗಳೆ, ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ? "

" ಪ್ರಭುಗಳೆ, ಪೇಶವೆಯವರು ಹೇಳಿಕೆಯ ಮಾತು ಕೇಳುವಷ್ಟು ಮೂರ್ಖರಿರಲಾರರೆಂದು ನಾನು ಭಾವಿಸಿದ್ದೇನೆ. ಅವರಿಂದ

ಪತ್ರ ಬರಲಿ, ಆಮೇಲೆ ವಿಚಾರ ಮಾಡೋಣ. ಕೊನೆಗೆ ಅವರು ಪುಣೆಯನ್ನಾದರೂ ತಲುಪಲಿ. ನಾವು ಈಗಿಂದೀಗ ಹೋದರೆ ಅವರ ಸಂಶಯವು ದೃಢವಾದೀತು. ಅವರಿಗಾದರೂ ವಿಚಾರ ಮಾಡಲು ಅವಕಾಶ ಕೊಡುವುದೇ ಒಳ್ಳೆಯದು. ಇದರ ಮೇಲೆ ಪ್ರಭುಚಿತ್ತ !"

ಗುರುಸಿದ್ಧಪ್ಪನು ಹೀಗೆ ನುಡಿದ ಬಳಿಕ ಮಲ್ಲಸರ್ಜ ದೊರೆಯು ಮಲ್ಲಪ್ಪಸೆಟ್ಟಿ, ವೆಂಕಟರಾಯರನ್ನು ಈ ಬಗ್ಗೆ ವಿಚಾರಿಸಿದನು. ಆಗ ವೆಂಕಟರಾಯನು ವಿನಯವನ್ನು ತೋರಿಸುತ್ತ— "ಪ್ರಧಾನಿಗಳ ಮಾತು ಯೋಗ್ಯವೆಂದು ತೋರುವದು. ಆದರೆ ಪೇಶವೆಯವರನ್ನು ಸಂಶಯದಲ್ಲಿ ಬಹಳ ದಿನ ಕೆಡಹುವದು ಒಳಿತಲ್ಲವೆಂದು ತೋರುವದು. ಎಡೂರಲ್ಲಿ ಭೆಟ್ಟಿಯಾಗದಿದ್ದರೂ ಅವರು ಪುಣೆಗೆ ಹೋದ ಕೂಡಲೆ ಭೆಟ್ಟಿಯಾಗುವದು ಒಳಿತು."

"ವೆಂಕಟರಾಯರೆ, ಇದೇನು ಹೇಳುವಿರಿ ? ಅವರು ಎಡೂರಿನಲ್ಲಿರುವಾಗಲೆ ಭೆಟ್ಟಿಯಾಗುವದು ವಿಹಿತವು. ಜನರ ಮಾತು ಕೇಳಿ ಸಂಶಯಗ್ರಸ್ತರಾದ ಅವರು ಒಮ್ಮೆಲೆ ಉಗ್ರಕ್ರಮ ತೆಗೆದುಕೊಳ್ಳಲಿಕ್ಕಿಲ್ಲೆಂದು ಹೇಗೆ ಹೇಳಬೇಕು ? ಭೆಟ್ಟಿಯಾಗುವದೇ ಆದರೆ ಆದಷ್ಟು ಶೀಘ್ರವಾಗಿ ಭೆಟ್ಟಿಯಾಗುವದು ವಿಹಿತವು."

ಮಲ್ಲಸೆಟ್ಟಿಯು ಹೀಗೆ ಹೇಳಿದ ಬಳಿಕ ಉಳಿದ ಕರ್ಮಚಾರಿಗಳು ಸೆಟ್ಟಿಯಂತೆಯೆ ಅಭಿಪ್ರಾಯಪಟ್ಟರು. ಕೊನೆಗೆ ತಕ್ಕಮಟ್ಟಿಗೆ ಪರಿವಾರ ತೆಗೆದುಕೊಂಡು ಎಡೂರಿಗೆ ಹೋಗಬೇಕೆಂದು ಓಲಗದಲ್ಲಿ ಗೊತ್ತುವಳಿಯಾಯಿತು. ಗುರುಸಿದ್ಧಪ್ಪನ ಮತವು ಬಿದ್ದುಹೋಯಿತು. ಅವನು ಉಪಾಯವಿಲ್ಲದೆ ಸ್ತಬ್ಧನಾದನು. ತರುವಾಯ ಸಭೆಯು ವಿಸರ್ಜಿಸಲ್ಪಟ್ಟಿತು.

ಮಲ್ಲಸರ್ಜ ದೇಸಾಯಿಯು ಓಲಗದಿಂದ ಅರಮನೆಗೆ ಬಂದನು.

ಅವನು ಚೆನ್ನಮ್ಮರಾಣಿಯ ಮುಂದೆ ಸಭೆಯ ಸಂಗತಿಯನ್ನು ತಿಳಿಸಿದನು— ಗುರುಸಿದ್ಧಪ್ಪನ ಅಭಿಪ್ರಾಯವೆ ಚೆನ್ನಮ್ಮರಾಣಿಗೆ ಸರಿಯಾಗಿ ತೋರಿತು. ಆದರೆ ಪೇಶವೆಯವರು ಉಗ್ರಕ್ರಮ ಕೈಕೊಂಡರೆ ಒಳಿತಾಗಲಿಕ್ಕಿಲ್ಲೆಂಬ ಓಲಗದವರ ಅಭಿಪ್ರಾಯದ ಕಡೆಗೆ ಅವಳು ಲಕ್ಷ್ಯಗೊಟ್ಟು— "ಕುಹಕಿಗಳ ಮಾತು ಕೇಳಿ ಶ್ರೀಮಂತರು ಸಿಟ್ಟಾಗುವದು ಸ್ವಾಭಾವಿಕ. ನೀವು ಅಲ್ಲಿಗೆ ಹೋಗಿ ಅವರ ಸಂಶಯ ನಿವಾರಣೆಗಾಗಿ ಪ್ರಯತ್ನಿಸಿರಿ. ಆದರೆ ನಾನೂ ನಿಮ್ಮೊಡನೆ ಅಲ್ಲಿಗೆ ಬರುವೆನು."

"ನೀನು ರಾಜಧಾನಿಯನ್ನು ಬಿಟ್ಟರೆ ಹೇಗೆ? ಓಲಗದಲ್ಲಿ ಗುರುಸಿದ್ಧಪ್ಪ ಪ್ರಧಾನಿಯ ಹೊರತು ಉಳಿದ ಜನರು ಅಷ್ಟು ನಂಬಿಗೆಯವರಾಗಿ ತೋರುವುದಿಲ್ಲ. ನಾವಿಬ್ಬರೂ ಹೊರಡುವದು ಅನುಚಿತವು. ನೀನಿದ್ದರೆ ನಾವಿದ್ದಂತೆಯೆ ಆಗುವದು. ಅಲ್ಲದೆ ಸೈದನಸಾಹೇಬನ ಮಸೀದೆಯ ಕಾರ್ಯ ಇದೀಗ ಪ್ರಾರಂಭವಾಗಿದೆ. ಕೆಲಸವಾದಂತೆ ವೇಳೆವೇಳೆಗೆ ಅವನಿಗೆ ಹಣವನ್ನು ಸಲ್ಲಿಸಬೇಕು. ನೀನೂ ಬಂದರೆ ಈ ಕಾರ್ಯಕ್ಕೆ ಸೆಟ್ಟಿಯಾಗಲಿ, ವೆಂಕಟರಾಯನಾಗಲಿ ಏನಾದರೂ ವ್ಯತ್ಯಯವನ್ನುಂಟು ಮಾಡಬಹುದು. ನೀನು ನನ್ನೊಡನೆ ಖಂಡಿತವಾಗಿಯೂ ಬರಬೇಡ."

ಮಲ್ಲಸರ್ಜ ದೇಸಾಯಿಯ ಮಾತಿನಿಂದ ಚೆನ್ನಮ್ಮರಾಣಿಯು ನಿರುಪಾಯಳಾದಳು. ಅವಳು— "ನೀವು ಸಾಕಷ್ಟು ಸೈನಿಕರನ್ನೂ ನಂಬಿಗೆಯ ಕಾರಭಾರಿಗಳನ್ನೂ ಕರೆದುಕೊಂಡು ಹೋಗಿರಿ."

"ಹೆಚ್ಚು ಸೈನಿಕರನ್ನು ಕರಕೊಂಡು ಹೋದರೆ ಶ್ರೀಮಂತರಿಗೆ ಮತ್ತಿಷ್ಟು ಸಂಶಯವುಂಟಾಗಬಹುದು. ನಾನು ನಿಯಮಿತ ಪರಿವಾರದೊಡನೆ ಹೊರಡುವೆನು."

" ಹಾಗಾದರೆ ಅಲ್ಲಿಯ ಸಂಗತಿಗಳನ್ನು ನಿತ್ಯವೂ ತಿಳಿಸುತ್ತಿರ ಬೇಕು. "

" ಚೆನ್ನಾ, ಇಷ್ಟೇಕೆ ಭಯಪಡುವೆ ? ಅಂಥದೇನು ಬಂದಿದೆ ? ವೀರಪತ್ನಿಯಾದ ನೀನು ಇಷ್ಟು ಅಧೀರಳಾಗಬೇಕೆ ? "

" ಸ್ವಾಮಿ, ನನ್ನನ್ನು ಅಧೀರಳೆಂದು ಭಾವಿಸಬೇಡಿರಿ. ನಿಮಗೆ ಏನಾದರೂ ಅನಿಷ್ಟವಾಗಬಾರದೆಂದು ನಾನು ಇಚ್ಛಿಸುತ್ತೇನೆ. "

ಮಲ್ಲಸರ್ಜ ದೇಸಾಯಿಯು ಚೆನ್ನಮ್ಮರಾಣಿಯನ್ನು ಸಮಾಧಾನ ಪಡಿಸಿದನು. ಅವನು ಮಾರನೆಯ ದಿನವೆ ನಿಯಮಿತ ಪರಿವಾರದೊಡನೆ ಎಡೂರಿಗೆ ಹೊರಟನು.

## ೮

ಮಲ್ಲಸರ್ಜ ದೇಸಾಯಿಯು ಎಡೂರಿಗೆ ಬಂದು ಪೇಶವೆ ಬಾಜೀರಾಯನಿಗೆ ಭೆಟ್ಟಿಯಾದನು. ಬಾಜೀರಾಯನು ಅವನೊಂದಿಗೆ ಹೆಚ್ಚಾಗಿ ಮಾತಾಡಲಿಲ್ಲ. ಆಡಿದ ಮಾತುಗಳು ಬಹಳೇ ಬಿಗುವಿನವಾಗಿದ್ದವು. ದೇಸಾಯಿಗೆ ಈ ಲಕ್ಷಣ ಬಹಳಾಗಿ ಕಾಣಲಿಲ್ಲ. ಮಾರನೆಯ ದಿನವೇ ಪೇಶವೆಯು ಎಡೂರನ್ನು ಬಿಟ್ಟು ಪುಣೆಗೆ ಪಯಣ ಬೆಳೆಸಿದನು. ಅವನು ದೇಸಾಯಿಯನ್ನು ಪುಣೆಗೆ ಕರೆದೊಯ್ದು ಮುಧೋಳಕರರ ಮನೆಯಲ್ಲಿ ಕಾವಲಿನೊಡನೆ ಇಟ್ಟನು. ಸದ್ಯಕ್ಕೆ ಅನುಕೂಲವಿಲ್ಲದ್ದರಿಂದ ಸಮಯ ನೋಡಿಕೊಂಡು ಓಲಗಕ್ಕೆ ಕರೆಯಿಸುವೆನೆಂದು ಅವನು ದೇಸಾಯಿಗೆ ತಿಳಿಸಿದನು. ಪೇಶವೆಯು ಹೀಗೆ ದಿನಾವಧಿ ಹಾಕಿದ್ದರಿಂದ ಅವನಿಗೆ ಬಹಳೇ ಚಡಪಡಿಕೆಯಾಯಿತು.

ದೇಸಾಯಿಯು ಕಿತ್ತೂರಿಂದ ಹೋಗಿ ಒಂದು ವಾರವಾದರೂ ತಿರುಗಿ ಬಾರದ್ದರಿಂದ ರುದ್ರಮ್ಮರಾಣಿಯೂ, ಚೆನ್ನಮ್ಮರಾಣಿಯೂ

ಬಹಳೇ ಚಿಂತೆಗೊಳಗಾದರು. ಗುರುಸಿದ್ಧಪ್ಪ ಪ್ರಧಾನಿಯೂ ಯೋಚನೆಗೊಳಗಾದನು. ಆಗ ಅವನು ರಾಜ್ಯಭಾರವನ್ನು ಚೆನ್ನಮ್ಮರಾಣಿಯ ಮೇಲೆ ಹೊರಿಸಿ ಪುಣೆಗೆ ಬಂದನು. ಅವನು ಓಲಗಕ್ಕೆ ಹೋಗಿ ಪೇಶವೆಯನ್ನು ಭೆಟ್ಟಿಯಾಗಿ ತಮ್ಮ ದೊರೆಯನ್ನು ಬಂಧನದಲ್ಲಿರಿಸಿದ ಬಗ್ಗೆ ಬಹಳವಾಗಿ ಚರ್ಚಿಸಿದನು. ತರುವಾಯ ಪೇಶವೆಯು ಮಲ್ಲಸರ್ಜ ದೇಸಾಯಿಯನ್ನು ಓಲಗಕ್ಕೆ ಕರೆಯಿಸಿದನು. ಬಾಜೀರಾಯನು ಅವನ ವಿರುದ್ಧವಾಗಿ ಅನೇಕ ಆರೋಪಗಳನ್ನು ಹೊರಿಸಿದನು. ಆದರೆ ದೇಸಾಯಿಯು ಆ ಆರೋಪಗಳನ್ನೆಲ್ಲ ನಿರಾಕರಿಸಿ, ದ್ವೇಷಿಗಳ ಸಂಚುಗಳ ಕಡೆಗೆ ಲಕ್ಷ್ಯಗೊಡಬಾರದೆಂದು ಬಿನ್ನವಿಸಿದನು. ಗುರುಸಿದ್ದಪ್ಪನಾದರೂ ಕಿತ್ತೂರವರು ತಮ್ಮಲ್ಲಿ ನಿಷ್ಠೆಯುಳ್ಳವರಿರುವರೆಂದು ದೃಢಪಡಿಸಲು ಪ್ರಯತ್ನಿಸಿದನು. ಗುರುಸಿದ್ಧಪ್ಪನ ಹಾಗು ದೇಸಾಯಿಯ ಹೇಳಿಕೆಯಿಂದ ಪೇಶವೆಯು ಕೆಲಮಟ್ಟಿಗೆ ಶಾಂತನಾದರೂ ಅವನ ಸಂದೇಹವು ಪೂರ್ಣವಾಗಿ ಹೋಗಲಿಲ್ಲ.

"ದೇಸಾಯರೆ, ಇನ್ನು ಮೇಲೆ ನೀವು ನಮ್ಮ ಸೈನ್ಯವನ್ನು ಕಿತ್ತೂರಲ್ಲಿಟ್ಟು ಅದರ ವೆಚ್ಚದ ಭಾರವನ್ನು ನೀವು ವಹಿಸಬೇಕಾಗುವದು. ಹಿಂದಿನಂತೆ ನೀವು ಪ್ರತಿವರ್ಷದಂತೆ ಕಪ್ಪ ಕೊಡುತ್ತ ಹೋಗಬೇಕು."

ಪೇಶವೆಯ ಈ ಕಟ್ಟಳೆಯು ಅಪಮಾನಕರವಾಗಿ ತೋರಿದ್ದರಿಂದ ದೇಸಾಯಿಯು ಅದನ್ನು ನಿರಾಕರಿಸಿದನು. ಪೇಶವೆಯು ಇನ್ನೂ ಕೆಲವು ಅಪಮಾನಕಾರಕವಾದ ಕಟ್ಟಳೆಗಳನ್ನು ಮುಂದೆ ಮಾಡಿದನು. ದೇಸಾಯಿ ಹಾಗು ಗುರುಸಿದ್ಧಪ್ಪನೂ ಅವನ ಯಾವ ಕಟ್ಟಳೆಗಳಿಗೂ ಒಪ್ಪಲಿಲ್ಲ. ನಮ್ಮ ವೈರಿಗಳ ಮಾತುಗಳಲ್ಲಿ ವಿಶ್ವಾಸವಿಟ್ಟು ನಮ್ಮನ್ನು ಅಪರಾಧಿಗಳೆಂದು ಬಗೆದು ಹೀಗೆ ಉಗ್ರ ಉಪಾಯಗಳನ್ನು ಕೈಕೊಳ್ಳುವುದು ಅಸಮಂಜಸವೂ ಅಪಮಾನಕರವೂ ಎಂಬುದನ್ನು ಗುರುಸಿ

ದ್ಧಪ್ಪನು ಪೇಶವೆಗೆ ಮನದಟ್ಟು ಮಾಡಿದನು. ಕೊನೆಗೆ ದೇಸಾಯಿಯು ಒಂದು ಲಕ್ಷ ಎಪ್ಪತ್ತೈದು ಸಾವಿರ ರೂಪಾಯಿ ಕಪ್ಪಕೊಡಲು ಒಪ್ಪಂದ ಮಾಡಿಕೊಂಡು ಪೇಶವೆಯನ್ನು ಸಂತಯಿಸಬೇಕಾಯಿತು.

ಒಡಂಬಡಿಕೆ ಮುಗಿಯುವ ಹೊತ್ತಿಗೆ ಮಲ್ಲಸರ್ಜ ದೇಸಾಯಿಯ ಆರೋಗ್ಯವು ಕೆಟ್ಟಿತ್ತು. ಒಂದೆರಡು ದಿನ ವಿಶ್ರಾಂತಿ ಹೊಂದಿ ಹೊರಡಬೇಕೆಂದು ಪೇಶವೆಯು ಅವನನ್ನು ಆಗ್ರಹದಿಂದ ಇಟ್ಟುಕೊಂಡನು. ಆದರೆ ಅಷ್ಟರಲ್ಲಿ ದೇಸಾಯಿಯು ಹಾಸುಗೆಯನ್ನೇ ಹಿಡಿದನು. ಗುರುಸಿದ್ಧಪ್ಪನು ಪೇಶವೆಗೆ ಭೆಟ್ಟಿಯಾಗಿ ದೇಸಾಯಿಯ ಪ್ರಕೃತಿ ಹೆಚ್ಚು ಹೆಚ್ಚು ಸ್ಥಿತ್ಯಂತರವಾಗಿರುವುದನ್ನು ತಿಳಿಸಿ, ತಮಗೆ ನಿರೋಪ ಕೊಡಬೇಕೆಂದು ಬೇಡಿಕೊಂಡನು. ಪೇಶವೆಯು ದೇಸಾಯಿಗೆ ಮೇಣೆಯನ್ನು ಸಂರಕ್ಷಣೆಗಾಗಿ ತಕ್ಕಷ್ಟು ಸೈನಿಕರನ್ನೂ, ಮಾರ್ಗದಲ್ಲಿ ಬೇನೆಗೆ ಚಿಕಿತ್ಸೆ ಮಾಡುವವರನ್ನೂ ಕೊಟ್ಟು ಕಳುಹಿಸಿದನು. ಕೊನೆಗೆ ಪೇಶವೆಯು ಸೌಹಾರ್ದ್ರತೆಯಿಂದ ನಡೆದ ಬಗ್ಗೆ ದೇಸಾಯಿಯೂ, ಗುರುಸಿದ್ದಪ್ಪನೂ ಸಂತುಷ್ಟರಾದರು.

ದೇಸಾಯಿಯು ಪ್ರಧಾನಿಯೊಡನೆ ಪುಣೆಯಿಂದ ಹೊರಟು ಎಡೂರಿಗೆ ಬಂದು ಅಲ್ಲಿ ವೀರಭದ್ರಸ್ವಾಮಿಯ ಪೂಜೆ ಮಾಡಿಸಿ ಜಂಗಮ ದಾಸೋಹ ನಡೆಯಿಸಿದನು. ತಾನು ಎಡೂರಿಗೆ ಬಂದದ್ದನ್ನೂ ತನ್ನ ಪ್ರಕೃತಿಯು ಅನಾರೋಗ್ಯಕರವಾದದ್ದನ್ನೂ ಕಿತ್ತೂರಿಗೆ ತಿಳಿಸಿದನು. ಹಾಗು ದುರದುಂಡಿಯ ವಸತಿಯಲ್ಲಿ ಎಲ್ಲರೂ ಬರಬೇಕೆಂದು ಬರೆದಿದ್ದನು. ಎಡೂರಲ್ಲಿ ಎರಡು ದಿನ ನಿಂತು ದೇಸಾಯಿಯು ತನ್ನ ಜನರೊಡನೆ ದುರದುಂಡಿಗೆ ತಲುಪಿದನು.

ಮಾರನೆಯ ದಿನವೆ ಕಿತ್ತೂರಿಂದ ದೊಡ್ಡ ಪರಿವಾರವು ದುರದುಂಡಿಗೆ ಬಂದಿತು. ರುದ್ರಮ್ಮರಾಣಿ, ಚೆನ್ನಮ್ಮರಾಣಿ, ಶಿವಲಿಂಗರುದ್ರ

ಸರ್ಜ, ವೀರವ್ವರಾಣಿ, ವೆಂಕಟರಾಯ, ಮಲ್ಲಪ್ಪಸೆಟ್ಟಿ ಮೊದಲಾದವರು ಬಂದು ದೇಸಾಯಿಯನ್ನು ಭೆಟ್ಟಿಯಾದರು. ಆಗ ದೇಸಾಯಿಯು ಸಂಭ್ರಮದಿಂದ ಎಲ್ಲರನ್ನೂ ಸ್ವಾಗತಿಸಿದನು. ರಾಜವೈದ್ಯರು ಅವನ ಪ್ರಕೃತಿಯನ್ನು ಪರೀಕ್ಷಿಸಿ, ಅಪಾಯವಿಲ್ಲವೆಂದು ತಿಳಿಸಿದರು. ಆಗ ಎಲ್ಲರೂ ಸಂತೋಷಬಟ್ಟರು.

ಅಂದು ಎಲ್ಲ ಜನರೂ ದುರದುಂಡಿಯಲ್ಲಿದ್ದರು. ಗುರುಸಿದ್ಧಪ್ಪನು ಪುಣೆಯ ಎಲ್ಲ ವಿಷಯವನ್ನು ಚೆನ್ನಮ್ಮ, ರುದ್ರಮ್ಮರಾಣಿಯರಿಗೂ, ಶಿವಲಿಂಗ ರುದ್ರಸರ್ಜರಿಗೆ ತಿಳಿಸಿದನು. ಪೇಶವೆಯು ತಂದೆಗೆ ಬಹಳೇ ತೊಂದರೆ ಕೊಟ್ಟನೆಂದೂ, ಆ ತೊಂದರೆಯಿಂದಲೆ ತಂದೆಯ ಪ್ರಕೃತಿಯು ಕೆಟ್ಟಿತೆಂದೂ ಶಿವಲಿಂಗರುದ್ರ ಸರ್ಜನು ವಾದಿಸಿದನು. ಆದರೆ ಗುರುಸಿದ್ಧಪ್ಪನು ಅವನ ಸಂದೇಹಗಳನ್ನು ನಿವಾರಿಸಲು ಬಹುಮಟ್ಟಿಗೆ ಪ್ರಯತ್ನ ಮಾಡಿದನು. ಪೇಶವೆಯವರು ವೈರಿಗಳ ದೂರಿನಿಂದ ಮೊದಲು ಕ್ರುದ್ಧನಾಗಿದ್ದರೂ, ಹಿಂದಿನಿಂದ ಆತ್ಮೀಯತೆಯಿಂದಲೂ ಗೌರವದಿಂದಲೂ ನಡೆದನೆಂಬ ಸಂಗತಿಯನ್ನು ದೇಸಾಯಿಯು ಮಗನಿಗೆ ತಿಳಿಸಿದನು. ಆದರೂ ಶಿವಲಿಂಗರುದ್ರ ಸರ್ಜನ ಸಂದೇಹವು ಪೂರ್ಣವಾಗಿ ದೂರವಾಗಲಿಲ್ಲ.

ದುರದುಂಡಿಯಲ್ಲಿ ಎರಡು ದಿನ ನಿಂತು ತರುವಾಯ ರಾಜಪರಿವಾರವು ಬೆಳವಡಿಯನ್ನು ಸೇರಿತು. ಅಲ್ಲಿಯ ವೀರಭದ್ರಸ್ವಾಮಿಯ ಪೂಜೆ ಮಾಡಿ ಜಂಗಮ ದಾಸೋಹ ಮುಗಿಸಿ ಎಲ್ಲರೂ ಕಿತ್ತೂರನ್ನು ಸೇರಿದರು. ದೊರೆಯ ಸ್ವಾಗತಕ್ಕಾಗಿ ಕಿತ್ತೂರ ಕೋಟೆಯ ಮೇಲೆ ಮೂವತ್ತುನಾಲ್ಕು ತೋಪುಗಳು ಹಾರಿದವು. ದೊರೆಯ ಮೂವತ್ತು ನಾಲ್ಕು ವರ್ಷದ ಆಳಿಕೆಯ ಸೂಚನೆಗಾಗಿ ಈ ತೋಪುಗಳು ಹಾರಿದ್ದವು. ಕಿತ್ತೂರನ್ನು ಸೇರಿದ ಮೂರನೆಯ ದಿನ ದೊರೆಯು ಕಲ್ಮಠ

ಸ್ವಾಮಿಗಳ ದರ್ಶನಕ್ಕಾಗಿ ಮಠಕ್ಕೆ ಹೋಗಿ ಅವರ ದರ್ಶನ ಮಾಡಿಕೊಂಡು ಆಶೀರ್ವಾದ ಹೊಂದಿದನು. ಅಂದು ಸ್ವಾಮಿಗಳೊಡನೆ ರಾಜಕಾರಣದ ಮಾತು ನಡೆದವು. ದೇಸಾಯಿಗೆ ತನ್ನ ಬದುಕುವಿಕೆಯ ಬಗ್ಗೆ ಸಂಶಯವೆನಿಸಿತ್ತು. ಆದುದರಿಂದ ತನ್ನ ತರುವಾಯ ಶಿವಲಿಂಗರುದ್ರ ಸರ್ಜನಿಗೆ ಅಭಿಷೇಕ ಮಾಡಿಸಿ, ರಾಜ್ಯಕಾರ್ಯದಲ್ಲಿ ಸಾಧ್ಯವಾದ ಮಟ್ಟಿಗೆ ಲಕ್ಷ್ಯಗೊಡಬೇಕೆಂದು ಅವನು ಸ್ವಾಮಿಗಳಿಗೆ ವಿನಂತಿಮಾಡಿಕೊಂಡನು. ಬಹಳವಾಗಿ ದುಃಖಿಸುತ್ತಿರುವ ರುದ್ರಮ್ಮರಾಣಿಯನ್ನೂ ಚೆನ್ನಮ್ಮರಾಣಿಯನ್ನೂ ದೇಸಾಯಿಯು ಸಂತೈಸಿದನು. ತನ್ನ ತರುವಾಯ ತನಗಿಂತಲೂ, ಶಿವಲಿಂಗರುದ್ರ ಸರ್ಜನಿಗಿಂತಲೂ ಹೆಚ್ಚಾಗಿ ಚೆನ್ನಮ್ಮರಾಣಿಯಿಂದ ಆಡಳಿತದಲ್ಲಿ ಉಪಯೋಗವಾಗುವದೆಂದು ಅವನು ಸ್ವಾಮಿಗಳಿಗೆ ತಿಳಿಸಿದನು.

ದಿನದಿನಕ್ಕೆ ದೇಸಾಯಿಯ ಪ್ರಕೃತಿ ಕೆಡತೊಡಗಿತು. ರವಿವಾರ ಮುಂಜಾನೆ ಅವನಿಗೆ ಪ್ರಜ್ಞೆಯಿಲ್ಲದಾಯಿತು. ಸೋಮವಾರ ಮುಂಜಾನೆ ಅವನು ಲಿಂಗೈಕ್ಯವಾದನು. ರಾಜಮನೆತನದವರೂ, ರಾಜಪರಿವಾರದವರೂ, ಕಿತ್ತೂರ ಪ್ರಜಾಜನರೂ ದುಃಖಸಾಗರದಲ್ಲಿ ಮುಳುಗಿದರು.

ದೇಸಾಯಿಯ ಕಲೇವರವನ್ನು ಅತ್ಯಂತ ವಿಜೃಂಭಣೆಯಿಂದ ಮೆರೆಯಿಸಿ ಕಲ್ಮಠದ ಆವಾರದಲ್ಲಿ ಪೂರ್ವಜರ ಸಮಾಧಿಗಳ ಬಳಿಯಲ್ಲಿಯೆ ಸಮಾಧಿ ಮಾಡಲಾಯಿತು.

೬

ಚೆನ್ನಮ್ಮರಾಣಿಯು ಪುತ್ರಶೋಕವನ್ನು ಮರೆಯುವಷ್ಟರಲ್ಲಿಯೆ ಪತಿಯ ಮರಣದ ಹೊಸದುಃಖವುಂಟಾಯಿತು. ಶಿವಲಿಂಗಸರ್ಜನೇ

ಮಗನೆಂದು ಭಾವಿಸಿ ಅವಳು ಪುತ್ರಶೋಕವನ್ನು ಮರೆತಿದ್ದಳು. ಪತಿಯು ಮರಣದಿಂದ ಅವಳ ಮೇಲೆ ಅರಸೊತ್ತಿಗೆಯ ಭಾರವು ಬಹಳವಾಗಿ ಬಿದ್ದಿತು. ಯಾಕೆಂದರೆ ಶಿವಲಿಂಗಸರ್ಜನು ಪತಿಯಂತೆ ಕರ್ತವ್ಯದಕ್ಷನೂ, ಧೈರ್ಯಶಾಲಿಯೂ, ಶೂರನೂ ಇರಲಿಲ್ಲ; ಅಲ್ಲದೆ ಹೇಳಿಕೆಯ ಮಾತಿಗೆ ಕಿವಿಗೊಡುವವನೂ, ಸ್ವಾರ್ಥಸಾಧಕರ ಮೋಸಕ್ಕೆ ಬಲಿಬೀಳುವಂಥವನೂ ಆಗಿದ್ದನು. ಇವನು ಪರಮಸ್ವಾರ್ಥಿಯಾದ ಮಲ್ಲಪ್ಪಸೆಟ್ಟಿಯ ಜಾಲದಲ್ಲಿ ಸಿಲುಕಿದ್ದನು. ಇವನ ಬಲದಿಂದಲೆ ಸೆಟ್ಟಿಯ ಪ್ರಸ್ಥವು ಓಲಗದಲ್ಲಿ ಬಹಳವಾಗಿ ಬೆಳೆದು, ರಾಜನಿಷ್ಠ ಗುರುಸಿದ್ಧಪ್ಪನ ವರ್ಚಸ್ಸನ್ನು ಕೂಡ ಕೆಲಮಟ್ಟಿಗೆ ಕಡಿಮೆ ಮಾಡಿತ್ತು. ಚೆನ್ನಮ್ಮರಾಣಿಯು ಪತಿನಿಧನದ ತರುವಾಯ ಬಹಳೇ ಗೊಂದಲದಲ್ಲಿ ಬಿದ್ದಳು. ಆದರೆ ಅವಳು ಬಂದ ಗಂಡಾಂತರಕ್ಕೆ ಎದೆಗೊಟ್ಟು ನಿಲ್ಲಲು ಸಿದ್ಧಳಾದಳು.

ಪತಿಯು ಮರಣದ ಸೂತಕ ದಿನಗಳು ಮುಗಿದೊಡನೆಯೆ ಶಿವಲಿಂಗಸರ್ಜನ ಪಟ್ಟಾಭಿಷೇಕ ಸಮಾರಂಭವು ನೆರವೇರಿಸಲ್ಪಟ್ಟಿತು. ಶಿವಲಿಂಗ ಸರ್ಜನಾದರೂ ತಾಯಿಗಿಂತ ಮಿಗಿಲಾಗಿ ಪ್ರೀತಿಸುತ್ತಿರುವ ಚೆನ್ನಮ್ಮರಾಣಿಯನ್ನು ಮುಂದೆ ಮಾಡಿ ರಾಜ್ಯಭಾರವನ್ನು ಸಾಗಿಸಹತ್ತಿದನು. ಸಂಸ್ಥಾನದ ಆಡಳಿತವು ಸುಸೂತ್ರವಾಗಿ ಸಾಗಿದ್ದನ್ನು ನೋಡಿ ರುದ್ರಮ್ಮರಾಣಿಯು ನಿಶ್ಚಿಂತಳಾಗಿ ಆಧ್ಯಾತ್ಮ ಚಿಂತನೆಯಲ್ಲಿ ಕಾಲಕಳೆಯಹತ್ತಿದಳು. ಕಲ್ಮಠದ "ಗುರುಸಿದ್ಧಸ್ವಾಮಿಗಳು ಆಗಿಂದಾಗ ಓಲಗಕ್ಕೆ ಬಂದು ಚಿಕ್ಕ ದೇಸಾಯಿಗೆ ರಾಜಕಾರಣದಲ್ಲಿ ಸಲಹೆ ಕೊಡುತ್ತಿದ್ದರು. ದೇಸಾಯಿಯಾದರೂ ಅವರನ್ನು ಪೂಜ್ಯ ಭಾವನೆಯಿಂದ ನೋಡುತ್ತ ಅವರ ಸಲಹೆಗಳಂತೆ ನಡೆದುಕೊಳ್ಳುತ್ತಿದ್ದನು

ವೀರಮ್ಮರಾಣಿಯು **ಪತಿಭಕ್ತಿಪರಾಯಣಳಿದ್ದಳು.** ಇವಳು **ಶಿವಗುತ್ತಿಯ ದೇಸಾಯಿಯ** ಮಗಳಾದುದರಿಂದ ರಾಜಕಾರಣದಲ್ಲಿ

ಗತಿಯುಳ್ಳವಳಾಗಿದ್ದಳು. ಅವಳಾದರೂ ಚೆನ್ನಮ್ಮನಂತೆ ಪತಿಗೆ ಸಲಹೆ ಕೊಡುತ್ತಿದ್ದಳು. ಮಲ್ಲಸರ್ಜನ ನಿಧನದಿಂದ ಹರುಷಗೊಂಡವರಲ್ಲಿ ಮಲ್ಲಪ್ಪಸೆಟ್ಟಿಯೂ, ವೆಂಕಟರಾಯನೂ, ಶಿವಬಸಪ್ಪನೂ ಪ್ರಮುಖ ರಾಗಿದ್ದರು. ಶಿವಲಿಂಗರುದ್ರ ಸರ್ಜನು ಗುರುಸಿದ್ಧಪ್ಪ ಪ್ರಧಾನಿಗೆ ಮಾನ್ಯತೆ ಕೊಡುತ್ತಿದ್ದರೂ ಮಲ್ಲಪ್ಪಸೆಟ್ಟಿಯಲ್ಲಿಯೂ, ವೆಂಕಟರಾಯ ನಲ್ಲಿಯೂ ವಿಶ್ವಾಸವುಳ್ಳವನಾಗಿದ್ದನು. ಹೀಗಾಗಿ ಓಲಗದಲ್ಲಿ ಇವರ ಆಧ್ಯತೆ ಮೊದಲಿಗಿಂತಲೂ ಹೆಚ್ಚಾಗಿತ್ತು. ಚೆನ್ನಮ್ಮನು ಆಗಿಂದಾಗ ಶಿವಲಿಂಗರುದ್ರಸರ್ಜ ದೇಸಾಯಗೆ ಅವರಲ್ಲಿ ಹೆಚ್ಚಾಗಿ ವಿಶ್ವಾಸವಿಟ್ಟು ನಡೆಯಲಾಗದೆಂದು ಎಚ್ಚರಿಸುತ್ತಿದ್ದಳು. ಅವಳ ಎಚ್ಚರಿಕೆಯನ್ನು ಚಿಕ್ಕ ದೇಸಾಯಿಯು ದುರ್ಲಕ್ಷಿಸುತ್ತಿದ್ದನು.

ಮರಾಟರ ನಾಲ್ಕನೆಯ ಯುದ್ಧವು ಪ್ರಾರಂಭವಾಯಿತು. ಎಷ್ಟೋ ದೇಸಾಯಿಯವರು ಪೇಶವೆಯವರ ವಿರುದ್ಧವಾಗಿ ಇಂಗ್ಲಿಷರಿಗೆ ಸಹಾ ಯಮಾಡಿದರು. ಕಿತ್ತೂರ ದೇಸಾಯಿಯೂ ಮಲ್ಲಪ್ಪಸೆಟ್ಟಿಯ ಹಾಗು ವೆಂಕಟರಾಯನ ಸಲಹೆಯಂತೆ ಇಂಗ್ಲಿಷರಿಗೆ ನೆರವಾಗಲು ಸಿದ್ಧನಾ ದನು. ಈ ಸಂಗತಿಯು ಚೆನ್ನಮ್ಮ, ರುದ್ರಮ್ಮರಾಣಿಯರಿಗೆ ತಿಳಿಯಿತು. ಆಗ ಅವರು ಮಗನನ್ನು ಕರೆಯಿಸಿಕೊಂಡು ಬಹುಪರಿಯಾಗಿ ಹೇಳಿ ದರು. ತಂದೆಯ ಮರಣಕ್ಕೆ ಪೇಶವೆಯವರೆ ಕಾರಣರಾದರೆಂದೂ, ಈಗ ಅವರ ಮೇಲಿನ ಸೇಡು ತೀರಿಸಿಕೊಳ್ಳುವದಕ್ಕಾಗಿ ಕಂಪನಿಯವ ರಿಗೆ ಸಹಾಯ ಮಾಡುವೆನೆಂತಲೂ ಅವನು ಇಬ್ಬರೂ ತಾಯಂದಿ ರಿಗೆ ತಿಳಿಸಿದನು. “ ಇಂಗ್ಲಿಷರು ಪರಕೀಯರು; ಪೇಶವೆಯವರು ಸ್ವಕೀಯರು. ನಾವು ಸ್ವಕೀಯರನ್ನು ಸ್ವ-ಪರಾಕ್ರಮದಿಂದ ಜಯಿಸ ಬೇಕು. ಈ ಕೆಲಸಕ್ಕಾಗಿ ಪರಕೀಯರ ಸಹಾಯ ಪಡೆಯಬಾರದು. ಸ್ವಕೀಯರ ಮೇಲೆ ಪರಕೀಯರ ದಾಳಿಯಾದರೆ ನಾವು ಸ್ವಕೀಯ

ರಿಗೆ ಸಹಾಯ ಸಲ್ಲಿಸಬೇಕು. ಈಗ ನಾವು ಒಳಜಗಳ ಮುಂದೆ ಮಾಡಿ ಕಂಪನಿಯವರಿಗೆ ನೆರವಾದರೆ, ಇಂದು ಅವರು ಪೇಶವೆಯ ರನ್ನು ಮುರಿಯುವರು; ನಾಳೆ ನಮ್ಮನ್ನೂ ಮುರಿಯುವರು. ಕಂಪನಿಯವರ ಹಿಂದಿನ ಇತಿಹಾಸವು ಇದನ್ನೇ ತಿಳಿಸುವದಿಲ್ಲವೆ ? " ಮೊದಲಾದ ಒಳ್ಳೆಯ ಮಾತುಗಳನ್ನು ಚೆನ್ನಮ್ಮರಾಣಿಯು ಮಗನಿಗೆ ಹೇಳಿದಳು. ಹಿರಿಯರ ಆಜ್ಞೆಯಂತೆ ವರ್ತಿಸುವದರಲ್ಲಿಯೆ ನಮ್ಮ ಕಲ್ಯಾಣವಿರುವದೆಂದು ವೀರಮ್ಮರಾಣಿಯೂ ಸೂಚಿಸಿದಳು, ಕಂಪನಿಯವರಿಗೆ ಸಹಾಯ ಮಾಡಿದರೆ ನಾನು ಜೀವಿಸಿ ಉಳಿಯುವದಿಲ್ಲೆಂದು ರುದ್ರಮ್ಮರಾಣಿಯು ನಿಷ್ಠುರವಾಗಿ ಹೇಳಿದಳು—ಗುರುಸಿದ್ಧಪ್ಪ ಪ್ರಧಾನಿಯು ತಾನು ನಿವೃತ್ತಿ ಹೊಂದುವೆನೆಂದು ಸ್ಪಷ್ಟರೀತಿಯಿಂದ ಹೇಳಿದನು. ಇಬ್ಬರು ತಾಯಂದಿರು, ಹೆಂಡತಿ, ಪ್ರಧಾನಿ ಇವರೆಲ್ಲರ ವಿರುದ್ಧವಾಗಿ ನಡೆಯುವದು ಶಿವಲಿಂಗರುದ್ರ ಸರ್ಜನಿಗೆ ಕಠಿಣವಾಯಿತು. ಮಲ್ಲಪ್ಪಸೆಟ್ಟಿಯು ದೇಸಾಯಿಗೆ ಧೈರ್ಯ ಕೊಡುತ್ತಿದ್ದನು. ಇಂಗ್ಲಿಷರೊಡನೆ ಗುಪ್ತವಾಗಿ ಕರಾರು ಮಾಡಿಕೊಂಡಂತೆ ನಡೆದರೆ ಮುಂದೆ ಸಂಸ್ಥಾನವು ಉಳಿಯುವದು. ಹಾಗೆ ಮಾಡದಿದ್ದರೆ ಪೇಶವಾಯಿಯನ್ನು ಮುಳುಗಿಸಿದ ಇಂಗ್ಲಿಷರು ಕಿತ್ತೂರನ್ನೂ ತೆಗೆದುಕೊಳ್ಳದೆ ಬಿಡಲಾರದೆಂದು ಬೆದರಿಸಿದನು. ಬಲಾಢ್ಯರಾದ ಇಂಗ್ಲಿಷರ ಸ್ನೇಹ ಕಾಯ್ದುಕೊಂಡು ಹೋಗುವದರಲ್ಲಿಯೆ ಮುತ್ಸದ್ದಿತನವಿರುವದೆಂದು ಅವನು ದೇಸಾಯಿಗೆ ಮನದಟ್ಟಾಗುವಂತೆ ಬೋಧಿಸಿದನು.

ಮಲ್ಲಪ್ಪಸೆಟ್ಟಿಯೂ, ವೆಂಕಟರಾಯನೂ ಕಂಪನಿಯ ಅಧಿಕಾರಿಯಾದ ಮನ್ರೋನೊಡನೆ ಒಪ್ಪಂದ ಮಾಡಿಕೊಂಡು ಬಂದು, ಒಡಂಬಡಿಕೆಯ ಪತ್ರಕ್ಕೆ ಸಹಿ ಮಾಡಿ ಕಂಪನಿಯವರಿಗೆ ಕಳಿಸಿದ್ದರು. ಪ್ರಧಾನಿಯ ಹಾಗೂ ಚೆನ್ನಮ್ಮರಾಣಿಯ ವಿರೋಧವಿದ್ದರೂ, ಸೆಟ್ಟಿಯು

ಹಾಗು ವೆಂಕಟರಾಯನ ಉಪದೇಶದಿಂದ ಈ ಕೆಲಸವಾಗಿಹೋ-ಗಿತ್ತು. ಒಡಂಬಡಿಕೆಯನ್ನು ರದ್ದುಪಡಿಸಿದ್ದೇವೆಂದು ಇಂಗ್ಲಿಷರಿಗೆ ತಿಳಿಸಿ, ಪೇಶವೆಯವರಿಗೇ ಸಹಾಯ ಮಾಡಬೇಕೆಂದು ಚೆನ್ನಮ್ಮರಾಣಿಯು ಮಗನಿಗೆ ಹೇಳತೊಡಗಿದ್ದಳು. ಪ್ರಧಾನಿಯಾದರೂ ಈ ಬಗ್ಗೆ ಬಹುಪರಿಯಾಗಿ ಉಪದೇಶಿಸಿದ್ದಲ್ಲದೆ, ಇಂಗ್ಲಿಷರಿಗೆ ಸಹಾಯ ಮಾಡಿದರೆ ಪ್ರಧಾನಿಯ ಕೆಲಸವನ್ನು ಬಿಟ್ಟುಕೊಡುವೆನೆಂದು ಅನೇಕ ಸಾರೆ ಹೇಳಿದ್ದನು. ಈ ವಿಷಯದಲ್ಲಿ ಕೆಲವು ದಿನ ವಾದ-ವಿವಾದ ನಡೆದು ಕೊನೆಗೆ ಮಲ್ಲಪ್ಪಸೆಟ್ಟಿಯ ಅಭಿಪ್ರಾಯದಂತೆ ದೇಸಾಯಿಯು ಇಂಗ್ಲಿಷರಿಗೆ ಸಹಾಯ ಮಾಡುವುದಾಗಿ ಸಾರಿದನು. ಪೇಶವೆಯರೊಡನೆ ಬೆಳಗಾವಿಯಲ್ಲಿ ನಡೆದ ಯುದ್ಧದಲ್ಲಿ ಕಿತ್ತೂರ ದೇಸಾಯಿ-ಯೂ ಇನ್ನಿತರ ಕೆಲವು ದೇಸಾಯಿಯರೂ ಪೇಶವೆಯವರ ವಿರುದ್ಧವಾಗಿ ಇಂಗ್ಲಿಷರಿಗೆ ಸಹಾಯ ಮಾಡಿದರು.

ಮರಾಠರ ನಾಲ್ಕನೆಯ ಯುದ್ಧದಲ್ಲಿ ಜಯಸಿರಿಯು ಇಂಗ್ಲಿಷರಿಗೆ ಮಾಲೆಹಾಕಿದಳು. ಅವರು ಪೇಶವೆಯುವರನ್ನು ಸ್ವಾಧೀರಪಡಿಸಿಕೊಂಡು, ಕೊನೆಯ ಪೇಶವೆ ಎರಡನೆಯ ಬಾಜೀರಾಯನಿಗೆ ಎಂಟು ಲಕ್ಷರೂಪಾಯಿ ವೇತನ ಗೊತ್ತುಪಡಿಸಿ ಬ್ರಹ್ಮಾವರ್ತದಲ್ಲಿಯ ಬಿಠೂರ ಗ್ರಾಮದಲ್ಲಿಟ್ಟರು. ಪೇಶವೆಯವರ ಸ್ವಾಧೀನದಲ್ಲಿಯ ಸಂಸ್ಥಾನಿಕರೂ, ದೇಸಾಯಿಯರೂ ಆಂಗ್ಲರಿಗೆ ಅಂಕಿತರಾದರು. ಹಿಂದುಸ್ತಾನದ ಬಹುಭಾಗವು ಆಂಗ್ಲರ ಒಡೆತನಕ್ಕೆ ಬಂದಂತಾಯಿತು. ಪೇಶವೆಯರ ಅಂಕಿತದಲ್ಲಿದ್ದ ಎಲ್ಲ ಸಂಸ್ಥಾನಿಕರೊಡನೆ ಇಂಗ್ಲಿಷರು ಹೊಸದಾಗಿ ಒಪ್ಪಂದ ಮಾಡಿಕೊಂಡರು. ಕಿತ್ತೂರ ಸಂಸ್ಥಾನವೂ ಆಂಗ್ಲರ ಒಡೆತನಕ್ಕೊಳಗಾಯಿತು.

ಸರ್ ಥಾಮಸ್ ಮನ್ರೋನು ಶಿವಲಿಂಗರುದ್ರಸರ್ಜ ದೇಸಾಯಿ

ಯೊಡನೆ ವರ್ಷಕ್ಕೆ ಒಂದು ಲಕ್ಷ ಎಪ್ಪತ್ತೆರಡು ಸಾವಿರ ರೂಪಾಯಿ ಕೊಡಬೇಕೆಂದೂ, ಸೈನ್ಯದ ವೆಚ್ಚಕ್ಕಾಗಿ ಖಾನಾಪೂರ ತಾಲೂಕನ್ನು ಕೊಡಬೇಕೆಂದೂ ಕರಾರಾಯಿತು. ಮಲ್ಲಪ್ಪಸೆಟ್ಟಿ, ವೆಂಕಟರಾಯರ ಕಾರಸ್ಥಾನದಿಂದ ಈ ಕರಾರು ಪೂರ್ಣಗೊಂಡಿತ್ತು.

ಶಿವಲಿಂಗರುದ್ರಸರ್ಜನ ಈ ಹೊಸ ಒಪ್ಪಂದವು ಚೆನ್ನಮ್ಮರಾಣಿಗೆ ಸರಿಯಾಗಿ ತೋರಲಿಲ್ಲ. ಪೇಶವೆಯವರನ್ನು ಇಂಗ್ಲಿಷರು ಸೋಲಿಸಿದ ಮಾತ್ರದಿಂದ ನಾವೇಕೆ ಅವನಿಗೆ ಕಪ್ಪ ಕೊಡಬೇಕೆಂದು ಪ್ರತಿಭಟಿಸಿದಳು.

ಮಗನು ವಿರೋಧದಿಂದ ನಡೆದಿದುದಕ್ಕಾಗಿ ರುದ್ರಮ್ಮರಾಣಿಯು ಬಹಳವಾಗಿ ನೊಂದುಕೊಂಡಳು. ಅವಳು ಕಿತ್ತೂರನ್ನು ಬಿಟ್ಟು ಸಂಗೊಳ್ಳಿಯ ಕೋಟೆಯಲ್ಲಿರತೊಡಗಿದಳು. ಅವಳು ಶೇಷಾಯುಷ್ಯವನ್ನು ದೇವರ ಚಿಂತನೆಯಲ್ಲಿ ಕಳೆಯಬೇಕೆಂದು ನಿರ್ಧಾರಮಾಡಿಕೊಂಡಿದ್ದಳು. ಮಗನು ಕಿತ್ತೂರ ಸಂಸ್ಥಾನದ ಗೌರವವನ್ನು ಕಳೆಯುವಂತಹ ವರ್ತನವನ್ನು ಸಹನೆ ಮಾಡುವದಾಗಲಿಲ್ಲ. ಅದೇ ಚಿಂತೆಯಿಂದ ಅವಳು ಸಂಗೊಳ್ಳಿಯ ಕೋಟೆಯಲ್ಲಿ ನಿಧನ ಹೊಂದಿದಳು. ಅವಳ ಕಳೇಬರವನ್ನು ವೈಭವದಿಂದ ಮೆರೆಯಿಸಿ, ಅಲ್ಲಿಯೆ ಮಲಪ್ರಭೆಯ ತೀರದಲ್ಲಿ ಅವಳ ಸಮಾಧಿಯನ್ನು ಮಾಡಿದರು. ಕಿತ್ತೂರ ಸಂಸ್ಥಾನದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರರಾಣಿ ರುದ್ರಮ್ಮನ ಕೀರ್ತಿ ಸೂಚಕವಾದ ಅವಳ ಸಮಾಧಿಯನ್ನು ಇಂದಿಗೂ ನಾವು ನೋಡಬಹುದು.

ರುದ್ರಮ್ಮನ ಮರಣದಿಂದ ಚೆನ್ನಮ್ಮನಿಗೆ ಬಹಳ ವ್ಯಸನವಾಯಿತು. ಒಡಹುಟ್ಟಿದ ಅಕ್ಕನಿಗಿಂತ ಹೆಚ್ಚಾಗಿ ಮಮತೆ ಮಾಡುತ್ತಿದ್ದ ರುದ್ರಮ್ಮನ ವಿಯೋಗದಿಂದ ಅವಳ ಬಲಗೈಯೇ ಹೋದಂತಾಯಿತು.

ಆದರೂ ಅವಳು ಧೈರ್ಯಗೆಡದೆ ತನ್ನ ಕರ್ತವ್ಯವನ್ನು ದಕ್ಷತೆಯಿಂದ ಮಾಡತೊಡಗಿದಳು. ತನ್ನ ವರ್ತನೆಯು ತಾಯಿಗೆ ವಿರೋಧವೆನಿಸಿ, ಅದೇ ಚಿಂತೆಯಲ್ಲಿಯೇ ಅವಳು ಮೃತಿಹೊಂದಿದಳೆಂಬುದು ಶಿವಲಿಂಗ ಸರ್ಜ ದೇಸಾಯಿಗೆ ತಿಳಿದಿತ್ತು. ತನ್ನ ಪ್ರೇಮದ ತಾಯಿಯ ಮರಣಕ್ಕೆ ಕಾರಣನಾದೆನೆಂದು ದೇಸಾಯಿಯು ಬಹಳವಾಗಿ ವ್ಯಥೆಪಟ್ಟನು. ತಾಯಿಯು ಮೃತವಾದಂದಿನಿಂದ ಅವನು ರಾಜ್ಯಕಾರ್ಯವನ್ನು ತಾಯಿಗಿಂತಲೂ ಹೆಚ್ಚಾಗಿದ್ದ ಚೆನ್ನಮ್ಮರಾಣಿಯ ಕಡೆಗೆ ಒಪ್ಪಿಸಿದನು. ರಾಣಿಯು ಮಗನನ್ನು ಸಂತೈಸುತ್ತ ರಾಜ್ಯಭಾರವನ್ನು ದಕ್ಷತೆಯಿಂದ ಸಾಗಿಸತೊಡಗಿದಳು.

## ೧೦

ಶಿವಲಿಂಗರುದ್ರ ಸರ್ಜ ದೇಸಾಯಿಯು ಎಂಟು ವರ್ಷಗಳವರೆಗೆ ಆಡಳಿತ ನಡೆಯಿಸಿದನು. ಚೆನ್ನಮ್ಮರಾಣಿಯ ವರ್ಚಸ್ಸಿನಿಂದ ಸಂಸ್ಥಾನವು ಸ್ವತಂತ್ರವಾಗಿಯೆ ಉಳಿದಿತ್ತು. ಮಲ್ಲಪ್ಪಸೆಟ್ಟಿಯೂ, ವೆಂಕಟರಾಯನೂ ದೇಸಾಯಿಯ ಕೃಪಾಪಾತ್ರರಾಗಿದ್ದುದರಿಂದ ಅಧಿಕಾರದಲ್ಲಿ ಉಳಿದಿದ್ದರು. ಅವರು ತಮ್ಮ ಕಾರಸ್ಥಾನವನ್ನು ಬಿಟ್ಟಿದ್ದಿಲ್ಲ. ಒಳಗಿಂದೊಳಗೆ ಇಂಗ್ಲಿಷರಿಗೆ ಅನುಕೂಲವಾಗಿದ್ದು, ಇಲ್ಲಿಯ ಎಲ್ಲ ಸಂಗತಿಗಳನ್ನು ನಂಬಿಗೆಯ ಚಾರರ ಮುಖಾಂತರ ಕಂಪನಿ ಸರಕಾರಕ್ಕೆ ತಿಳಿಸುತ್ತಿದ್ದರು. ಕಂಪನಿಯವರಾದರೂ ಕಿತ್ತೂರ ಮೇಲೆ ಕೈಮಾಡಲು ಧೈರ್ಯ ಮಾಡಿರಲಿಲ್ಲ.

ಕ್ರಿಸ್ತಶಕ ೧೮೨೪ನೆಯ ವರ್ಷವು ಕಿತ್ತೂರಿಗೆ ದುರ್ದಿನವಾಗಿ ಪರಿಣಮಿಸಿತು. ದೇಸಾಯಿ ಶಿವಲಿಂಗಸರ್ಜ ದೊರೆಯು ಕ್ಷಯುವಿಕಾರ

ದಿಂದ ಹಾಸಿಗೆ ಹಿಡಿದರು. ರಾಜವೈದ್ಯರು ಉಪಚಾರ ನಡೆಯಿಸಿ, ಇನ್ನು ಬದುಕುವ ಆಸೆ ಇಲ್ಲೆಂದು ಚೆನ್ನಮ್ಮರಾಣಿಗೆ ತಿಳಿಸಿದರು. ಅವಳಿಗೆ ಆಕಾಶವೇ ಹರಿದು ಬಿದ್ದಂತಾಯಿತು. ಯಾಕಂದರೆ ದೇಸಾಯಿಗೆ ಸಂತಾನವಿರಲಿಲ್ಲ. ದೇಸಾಯಿಗಾದರೂ ತನ್ನ ಜೀವನಯಾತ್ರೆಯು ಬೇಗನೆ ಮುಗಿಯುವದೆಂದು ಮನವರಿಕೆಯಾಯಿತು. ಆಗ ಅವನು ಚೆನ್ನಮ್ಮರಾಣಿಯನ್ನೂ, ಪ್ರಧಾನಿ ಗುರುಸಿದ್ಧಪ್ಪ ಮೊದಲಾದ ಅಧಿಕಾರಿಗಳನ್ನೂ ಕರೆಯಿಸಿ, ದತ್ತಕ ವಿಧಾನವನ್ನು ಮಾಡಬೇಕೆಂದು ಸೂಚಿಸಿದನು. ರುದ್ರಮ್ಮರಾಣಿಯ ಕಡೆಯವರಾದ ಮಾಸ್ತಮರಡಿಯ ಗೌಡನ ಮಗನನ್ನು ದತ್ತಕ ತೆಗೆದುಕೊಳ್ಳಬೇಕೆಂದು ತೀರ್ಮಾನವಾಯಿತು. ಶುಭಮುಹೂರ್ತದಲ್ಲಿ ದತ್ತಕ ವಿಧಾನವು ಮುಗಿಯಿತು. ಕಲ್ಮಠ ಸ್ವಾಮಿ ಗುರುಸಿದ್ಧಯ್ಯನವರೂ, ಚೆನ್ನಮ್ಮರಾಣಿ, ವೀರಮ್ಮರಾಣಿಯರೂ, ಗುರುಸಿದ್ಧಪ್ಪ ಪ್ರಧಾನಿಯೂ, ಇತರ ಪ್ರಮುಖ ಕರ್ಮಚಾರಿಗಳೂ ದತ್ತುಪುತ್ರನಿಗೆ ಆಶೀರ್ವದಿಸಿದರು. ಯುವರಾಜನಿಗೆ **ಸವಾಯಿ ಮಲ್ಲಸರ್ಜ**ನೆಂದು ಹೆಸರಿಡಲಾಯಿತು.

ದತ್ತಕ ವಿಧಾನವು ಮುಗಿದ ಕೂಡಲೆ ಶಿವಲಿಂಗರುದ್ರಸರ್ಜನ ಪ್ರಕೃತಿಯು ಬಹಳೇ ಕ್ಷೀಣವಾಯಿತು. ರಾಜವೈದ್ಯರು ಬಹುಪರಿಯಾಗಿ ಉಪಚರಿಸಿದರು. ಆದರೆ ದೇಸಾಯಿಯ ಬೇನೆಯು ಬೆಳೆಯುತ್ತ ಹೋಗಿ ಮೈಮೇಲಿನ ಸ್ಮೃತಿಯೇ ತಪ್ಪಿತು. ಮಾರನೆಯ ದಿನವೆ ದೇಸಾಯಿಯು ಕಿತ್ತೂರನ್ನೇ ದುಃಖದಲ್ಲಿ ಕೆಡಹಿ ಪರಲೋಕವಾಸಿಯಾದನು. ಆಗ ಕಿತ್ತೂರ ಪ್ರಜೆಗಳು ಶೋಕಸಾಗರದಲ್ಲಿ ಮುಳುಗಿದರು. ಚೆನ್ನಮ್ಮರಾಣಿಗೆ ಹೇಳಲಸದಳ ದುಃಖವಾಯಿತು. ದುರ್ದೈವಿ ವೀರವ್ವರಾಣಿಯು ವಿಧವೆಯಾದಳು. ಅವಳ ಮೇಲೆ ಆಕಾಶವೇ ಕಳಚಿ ಬಿದ್ದಹಾಗಾಯಿತು. ಶಿವಲಿಂಗರುದ್ರ ಸರ್ಜನ ಶವವು ರಾಜೋಚೀತಮರ್ಯಾದೆಯಿಂದ ಮೆರೆಯಿಸಲ್ಪಟ್ಟಿತು. ತರುವಾಯ ಕಲ್ಮಠ

ದಲ್ಲಿ ಅವನ ಹಿರಿಯರ ಸಮಾಧಿಗಳ ಬಳಿಯಲ್ಲಿಯೆ ಸಮಾಧಿ ಮಾಡ ಲ್ಪಟ್ಟಿತು.

ಚೆನ್ನಮ್ಮನು ಸುಮ್ಮನೆ ದುಃಖಿಸುತ್ತ ಕುಳಿತುಕೊಳ್ಳುವಂತಿರ ಲಿಲ್ಲ. ರಾಜ್ಯದ ಒಳಗೂ ಹೊರಗೂ ಶತ್ರುಗಳು ಬಹಳವಾಗಿದ್ದರೂ ಇಂಗ್ಲಿಷರಂತೂ ಕಿತ್ತೂರನ್ನು ನುಂಗುವ ಯೋಚನೆಯಲ್ಲಿದ್ದರು. ಮೈಸೂ ರನ್ನೂ, ಪೇಶವೆಯವರನ್ನೂ ನುಂಗಿ ನೀರು ಕುಡಿದು ಅರಗಿಸಿದ ಕಂಪ ನಿಯವರಿಗೆ ಮಧ್ಯದಲ್ಲಿದ್ದ ಸಣ್ಣ ಕಿತ್ತೂರ ಸಂಸ್ಥಾನವು ಕಣ್ಣೊಳಗಿನ ಹರಳಿನಂತಾಗಿತ್ತು. ಆಗ ಕಂಪನಿಯವರು ಕಿತ್ತೂರ ಮೇಲ್ವಿಚಾರಣೆ ಗಾಗಿ **ಥ್ಯಾಕರೆ** ಎಂಬವನನ್ನು ಪೊಲಿಟಿಕಲ್ ಎಜಂಟ ( ರಾಜ ಕೀಯ ಪ್ರತಿನಿಧಿ ) ನನ್ನಾಗಿ ನಿಯಮಿಸಿದ್ದರು. ಥ್ಯಾಕರೆಯು ಏನಾ ದರೂ ನೆವ ತೆಗೆದು ಕಿತ್ತೂರನ್ನು ಕಬಳಿಸಬೇಕೆಂದು ಹೊಂಚುಹಾಕಿ ದ್ದನು. ಅವನ ಈ ಕಾರಸ್ಥಾನಕ್ಕೆ ಮಲ್ಲಪ್ಪಸೆಟ್ಟಿ, ವೆಂಕಟರಾಯರು ಸಹಕಾರಿಗಳಾಗಿದ್ದರು. ಚೆನ್ನಮ್ಮರಾಣಿಯು ಮನ್ರೋಕರಾರನ್ನು ತಿರ ಸ್ಕರಿಸಿದ ಬಗ್ಗೆ ಥ್ಯಾಕರೆಯು ಬೆಂಕಿಯನ್ನು ಕಾರತೊಡಗಿದ್ದನು. ಅವನು ಕಿತ್ತೂರರಾಣಿಯು ಧ್ಯೇಯ-ಧೋರಣಗಳನ್ನು ಕಂಪನಿಸರಕಾರಕ್ಕೆ ತಿಳಿ ಸಿದ್ದನು. ಅವರು ಈ ವಿಷಯದ ಪರಿಶೀಲನೆಯಲ್ಲಿರುವಾಗಲೆ ಅವನು ಕಿತ್ತೂರಿಗೆ ಧಾವಿಸಿದನು. ಕಿತ್ತೂರು ಕೈವಶವಾಗುವಂತೆ ಮಾಡಿದರೆ ಅದರಲ್ಲಿಯ ಅರ್ಧ ಭಾಗವನ್ನು ಮಲ್ಲಪ್ಪಸೆಟ್ಟಿಗೂ, ವೆಂಕಟರಾಯ ನಿಗೂ ಹಂಚಿಕೊಡುವ ಬಗ್ಗೆ ಥ್ಯಾಕರೆಯು ಅವರಿಗೆ ಬಾಯಿಯಿಂದ ಆಶ್ವಾಸನ ಕೊಟ್ಟಿದ್ದನು. ಕಿತ್ತೂರಿನ ಶಸ್ತ್ರಾಸ್ತ್ರಗಳು, ಸೈನ್ಯ ಮೊದಲಾ ದವುಗಳ ಅಳತೆಯು ಕೂಡ ಗೃಹಭೇದಿಗಳಿಂದ ಥ್ಯಾಕರೆಗೆ ತಿಳಿದಿತ್ತು.

ಶಿವಲಿಂಗರುದ್ರಸರ್ಜ ದೇಸಾಯಿಯು ಮೃತಪಟ್ಟ ಬಳಿಕ ಥ್ಯಾಕ ರೆಯು ಕಿತ್ತೂರಿಗೆ ಹೊರಡಬೇಕೆಂದು ಯೋಚಿಸಿ, ಕಿತ್ತೂರಿಗೆ ದೂತ

ನನ್ನು ಕಳುಹಿದನು. ದೂತನು ತಿರುಗಿ ಬರುವ ದಾರಿಯನ್ನು ಸಹ ನೋಡದೆ ಅವನು ತನ್ನ ಅಂಗರಕ್ಷಕರೊಡನೆ ಧಾರವಾಡದಿಂದ ಕಿತ್ತೂರಿಗೆ ಪಯಣಬೆಳೆಯಿಸಿದನು. ಅವನು ಪ್ರಧಾನಿ ಗುರುಸಿದ್ಧಪ್ಪನ ಕಡೆಗೆ ದೂತನನ್ನು ಕಳುಹಿಸಿ, ಹಿಂದಿನಿಂದ ಓಲಗಕ್ಕೆ ಹೊರಟನು. ಗುರುಸಿದ್ಧಪ್ಪನು ಥ್ಯಾಕರೆಯನ್ನು ಸನ್ಮಾನದಿಂದ ಬರಮಾಡಿಕೊಂಡನು.

"ಪ್ರಧಾನಿಗಳೆ, ಪೇಶವೆಯವರ ಸ್ಥಳದಲ್ಲಿ ಈಗ ಕಂಪನಿಯ ಸರಕಾರ ಬಂದು ಎಷ್ಟೋ ದಿವಸಗಳಾದವು. ನೀವು ಮಾತ್ರ ನಿಮ್ಮ ರಾಜ್ಯದ ಕಾರಭಾರವನ್ನು ಸ್ವತಂತ್ರವಾಗಿಯೆ ನಡೆಯಿಸಿದ್ದೀರಿ. ಮನ್ರೋ ಕರಾರಿನಂತೆ ಕಪ್ಪವನ್ನು ಕೂಡ ಕೊಡಲೊಲ್ಲಿರಿ. ಇದು ಯೋಗ್ಯವಲ್ಲ. ನಿಮಗೆ ಸಂಸ್ಥಾನವು ಉಳಿಯಬೇಕೆಂಬ ಆಶೆಯಿದ್ದರೆ ಮನ್ರೋ ಕರಾರಿನಂತೆ ನಡೆಯಲೇ ಬೇಕು. ಈ ಬಗ್ಗೆ ನಿಮ್ಮ ಚೆನ್ನಮ್ಮರಾಣಿಯ ಮನೋಗತವೇನಿರುವದೆಂಬುದನ್ನು ತಿಳಿದುಕೊಳ್ಳಲು ಬುದ್ಧಿಪೂರ್ವಕವಾಗಿ ಬಂದಿರುವೆನು."

ಥ್ಯಾಕರೆ ಸಾಹೇಬನು ಹೀಗೆ ನುಡಿದ ಬಳಿಕ ಗುರುಸಿದ್ಧಪ್ಪನು ಗಾಂಭೀರ್ಯದಿಂದ— "ಸಾಹೇಬರೆ, ಈ ಮಲ್ಲಪ್ಪಸೆಟ್ಟಿ, ವೆಂಕಟರಾಯರ ಕಾರಸ್ಥಾನದಿಂದ ಮನ್ರೋ ಒಪ್ಪಂದವಾಗಿದೆ. ಅದಕ್ಕೆ ನಮ್ಮ ಚೆನ್ನಮ್ಮರಾಣಿಯವರ ಒಪ್ಪಿಗೆಯಿಲ್ಲ."

"ಪ್ರಧಾನಿಗಳೆ, ನಾವು ಕಾರಸ್ಥಾನ ಮಾಡಿಲ್ಲ. ಸಂಸ್ಥಾನದ ಹಿತಕ್ಕಾಗಿ ಹಿಂದಿನ ದೊರೆ ಶಿವಲಿಂಗರುದ್ರ ಸರ್ಜ ದೇಸಾಯಿಯ ಅನುಮತಿಯಿಂದ ಒಪ್ಪಂದ ಮಾಡಿಕೊಂಡದ್ದಾಗಿದೆ. ಕಂಪನಿ ಸರಕಾರದ ವಿರುದ್ಧ ನಿಲ್ಲುವ ಶಕ್ತಿಯು ಕಿತ್ತೂರಿಗಿದೆಯೆ?" ಎಂದು ಮಲ್ಲಪ್ಪಸೆಟ್ಟಿಯು ಪ್ರಶ್ನೆ ಮಾಡಿದನು.

ಟೀಪೂವು ಕಂಪನಿಯವರ ವೈರ ಬೆಳಿಸಿ ಯಾವ ಗತಿ ಹೊಂದಿ

ದನು ? ಪೇಶವೆಯರ ಪರಿಣಾಮವೇನಾಯಿತು ? ಇದನ್ನೆಲ್ಲ ನಾವು ನೋಡದೆ ಅಹಂಕಾರದಿಂದ ಮನಬಂದಂತೆ ನಡೆದರೆ ನಮ್ಮ ಗತಿಯೂ ಅವರಂತೆ ಆಗುವದು. " ವೆಂಕಟರಾಯನು ಹೇಳಿದನು.

" ನಮಗೆ ಎಲ್ಲವೂ ಅರಿವಿದೆ. ಆದರೆ ಚೆನ್ನಮ್ಮರಾಣಿಯವರ ಇಚ್ಛೆಯು ಹಾಗಿಲ್ಲ. ಉಳಿದರೆ ಸ್ವತಂತ್ರವಾಗಿ ಉಳಿಯಬೇಕು; ಅದು ಸಾಧ್ಯವಾಗದಿದ್ದರೆ ಅಳಿದು ಹೋಗಬೇಕು. ಪರಕೀಯರ ದಾಸ್ಯವು ಅವರಿಗೆ ಬೇಡ"—ಗುರುಸಿದ್ಧಪ್ಪನು ಹೀಗೆ ಸ್ಪಷ್ಟವಾಗಿ ಹೇಳಿದನು.

"ಛೇ! ನಿಮ್ಮ ಚೆನ್ನಮ್ಮರಾಣಿಯವರು ಇಲ್ಲಿಯೆ ತಪ್ಪುತ್ತಾರೆ. ನಾನು ಅವರನ್ನು ಭೆಟ್ಟಿಯಾಗಿ ಮಾತಾಡಬಹುದಲ್ಲವೆ. ಅವರ ತಪ್ಪು ತಿಳಿವಳಿಕೆಯನ್ನು ನಾನು ದೂರ ಮಾಡಬೇಕೆಂದು ನನ್ನ ಇಚ್ಛೆಯಿದೆ" ಎಂದು ಥ್ಯಾಕರೆಯು ಹೇಳಿದನು.

" ರಾಣಿಯವರನ್ನು ವಿಚಾರಿಸಿ ನಿಮಗೆ ತಿಳಿಸುವೆನು " ಎಂದು ಗುರುಸಿದ್ಧಪ್ಪನು ನುಡಿದು, ರಾಣಿಯ ಬಳಿಗೆ ಹೋಗಿ ಥ್ಯಾಕರೆಯ ಅಭಿಪ್ರಾಯವನ್ನು ತಿಳಿಸಿದನು. ಥ್ಯಾಕರೆಯ ಮನೋದಯವನ್ನು ಒಮ್ಮೆ ಪ್ರತ್ಯಕ್ಷವಾಗಿ ಕಂಡುಕೊಳ್ಳಬೇಕೆಂದು ಯೋಚಿಸಿ, ಚೆನ್ನಮ್ಮರಾಣಿ ತನ್ನ ಓಲಗಕ್ಕೆ ಅವನನ್ನು ಕರೆಯಿಸಿದಳು. ಗುರುಸಿದ್ಧಪ್ಪ, ಮಲ್ಲಪ್ಪ, ವೆಂಕಟರಾಯ ಮೊದಲಾದವರು ಥ್ಯಾಕರೆಯೊಡನೆ ಚೆನ್ನಮ್ಮರಾಣಿಯ ಓಲಗಕ್ಕೆ ಹೋದರು.

ಥ್ಯಾಕರೆಯೂ, ಉಳಿದ ಅಧಿಕಾರಿಗಳೂ ಓಲಗವನ್ನು ಪ್ರವೇಶಿಸಿದ ಬಳಿಕ ಚೆನ್ನಮ್ಮರಾಣಿಯು ಅಲ್ಲಿಗೆ ಬಂದಳು. ಎಲ್ಲರೂ ರಾಣಿಗೆ ವಂದನೆಗಳನ್ನರ್ಪಿಸಿದರು; ಥ್ಯಾಕರೆಯೂ ನಮಸ್ಕಾರ ಮಾಡಿ ಅವಳ ಆಜ್ಞೆಯಾದ ಬಳಿಕ ತನ್ನ ಆಸನದಲ್ಲಿ ಕುಳಿತನು.

" ಥ್ಯಾಕರೆ ಸಾಹೇಬರೆ, ನಮ್ಮ ಪ್ರಧಾನಿಗಳು ನಮ್ಮ ಅಭಿಪ್ರಾ-

ಯವನ್ನು ನಿಮಗೆ ತಿಳಿಸಿದ್ದರೂ ನನ್ನನ್ನು ಕಾಣಲು ಅಪೇಕ್ಷಿಸಿದ ಮೂಲಕ ನಿಮ್ಮನ್ನು ಭೆಟ್ಟಿಯಾಗಬೇಕಾಯಿತು. ”

“ ಭೆಟ್ಟಿಯಾದದ್ದೇ ಒಳ್ಳೇಯದಾಯಿತು. ನಿಮ್ಮ ಸಂಸ್ಥಾನವು ನಿಮಗೆ ನಿರಾತಂಕವಾಗಿ ಉಳಿಯಬೇಕೆಂದು ನಮ್ಮ ಮನೋದಯವಿತ್ತು. ಆದರೆ ನೀವು ದೊಡ್ಡ ತಪ್ಪು ಮಾಡಿದಿರಿ. ಶಿವಲಿಂಗರುದ್ರ ಸರ್ಜ ದೇಸಾಯಿಯವರು ನಿಧನ ಹೊಂದಿದ ಬಳಿಕ ದತ್ತಕ ತೆಗೆದುಕೊಳ್ಳಲಾಗಿದೆ. ಈ ಬಗ್ಗೆ ನಿಮ್ಮ ಓಲಗದ ಮಲ್ಲಪ್ಪಸೆಟ್ಟರ ಸಾಕ್ಷಿಯುಂಟು. ನಾವು ಕಳಿಸಿದ ಸಿವ್ಹಿಲ್ ಸರ್ಜನರಾದರೂ ದೇಸಾಯಿಯರಿಗೆ ಪ್ರಜ್ಞೆಯಿಲ್ಲದಾಗ ದತ್ತಕ ನಡೆಯಿತೆಂದು ಹೇಳುತ್ತಾರೆ. ಅಲ್ಲದೆ ದತ್ತಕಕ್ಕೆ ಕಂಪನಿ ಸರಕಾರದ ಅಪ್ಪಣೆ ಪಡೆದಿಲ್ಲ. ಮೇಲಾಗಿ ದತ್ತುಪುತ್ರನು ನಿಮ್ಮ ರಾಜಮನೆತನದವನಲ್ಲ. ಇಷ್ಟಾಗಿಯೂ ನೀವು ನಮ್ಮ ಮಾಂಡಲಿಕರಂತೆ ವರ್ತಿಸದೆ ಸ್ವತಂತ್ರ ರಾಜರಂತೆ ವ್ಯವಹರಿಸುತ್ತಿರುವಿರಿ. ನಮಗೆ ಸಲ್ಲತಕ್ಕ ಕಪ್ಪವನ್ನು ಕೂಡ ಕಟ್ಟು ಮಾಡಿದ್ದೀರಿ. ಇವೆಲ್ಲ ಅಪರಾಧಗಳ ಬಗ್ಗೆ ಪರಿಷ್ಕಾರ ಮಾಡಬೇಕಾದದ್ದು ನಿಮ್ಮ ಆದ್ಯ ಕರ್ತವ್ಯವಾಗಿದೆ. ನೀವು ಈ ತಪ್ಪುಗಳನ್ನು ಸರಿಪಡಿಸಲು ಯತ್ನಿಸಿ, ಮನ್ರೋ ಕರಾರಿನ ಮೇರೆಗೆ ನಡೆಯುವದಾದರೆ, ನಿಮ್ಮ ಪರವಾಗಿ ಕಂಪನಿಯ ಸರಕಾರಕ್ಕೆ ನಾನು ವಿನಂತಿ ಮಾಡಿಕೊಂಡು ಎಷ್ಟಾದರೂ ಸೌಕರ್ಯಗಳನ್ನೊದಗಿಸಿಕೊಡುವ ಮನಸ್ಸುಳ್ಳವನಾಗಿದ್ದೇನೆ.”

“ ನಿಮ್ಮ ಪುರಾಣ ಮುಗಿಯಿತೆ ? ” ಎಂದು ಚೆನ್ನಮ್ಮರಾಣಿಯು ವೀರಾವೇಶದಿಂದ— “ ನೀವು ಯಾರು ? ನಮ್ಮ ಮೇಲಿನ ಅಧಿಕಾರವನ್ನು ನಿಮಗೆ ವಹಿಸಿದವರಾರು ? ನಾವು ದತ್ತು ಪುತ್ರನನ್ನು ತೆಗೆದುಕೊಳ್ಳಲು ನಿಮ್ಮ ಒಪ್ಪಿಗೆ ನಮಗೆ ಬೇಕೆ ? ನಿಮ್ಮ ಸಿವ್ಹಿಲ್ ಸರ್ಜನರ ಅಭಿಪ್ರಾಯವು ಗ್ರಾಹ್ಯ, ನಮ್ಮ ಮಾತು ಅಗ್ರಾಹ್ಯವೆ ? ಈ

ಮಲ್ಲಪ್ಪಸೆಟ್ಟಿಯು ನಿಮ್ಮ ಹಸ್ತಕರಾಗಿದ್ದಾನೆ. ಇವರು ತಮ್ಮ ದುಷ್ಕರ್ಮಗಳ ಪ್ರಾಯಶ್ಚಿತ್ತವನ್ನು ಬೇಗನೆ ಅನುಭವಿಸುವರು. ವ್ಯಾಪಾರದ ಉದ್ದೇಶದಿಂದ ನಮ್ಮ ದೇಶಕ್ಕೆ ಬಂದು ನಮ್ಮ ಒಳಜಗಳಗಳ ಲಾಭ ಹೊಂದಿ, ನಮ್ಮ ಮೇಲೇ ಅಧಿಕಾರ ನಡೆಯಿಸಲು ಬಂದಿರುವಿರಾ? ನಾವು ನಿಮಗೆ ಕಪ್ಪ ಕೊಡಬೇಕೆ ? ಥ್ಯಾಕರೆ ಸಾಹೇಬರೆ, ನೀವು ಬಲಶಾಲಿಗಳಾಗಿರಬಹುದು, ನಾವು ದುರ್ಬಲರಿರಬಹುದು. ನೀವು ದೊಡ್ಡ ದೊಡ್ಡ ರಾಜ್ಯಗಳನ್ನು ನುಂಗಿ ನೀರು ಕುಡಿದಿರುವುದು ನಿಜ. ನಿಮ್ಮೊಡನೆ ಸಂಗ್ರಾಮ ಮಾಡಿ ಕಿತ್ತೂರು ಜಯಶಾಲಿಯಾಗುವ ಸಂಭವವು ಬಹಳ ಕಡಿಮೆಯಾಗಿರಬಹುದು. ಆದರೆ ಕಿತ್ತೂರು ಪರಕೀಯರಾದ ನಿಮ್ಮನ್ನು ಕಾಲತ್ರಯದಲ್ಲಿಯೂ ಅಧಿರಾಜರೆಂದು ಮನ್ನಿಸಲಾರದು. ಪೇಶವೆಯವರು ನಮ್ಮವರು. ನಮಗೆ ಅಹಿತ ಮಾಡಿದ್ದರೂ ಅವರು ನಮ್ಮ ಬಾಂಧವರು. ನೀವು ನಮ್ಮ ನೆಂಟರೇ ? ನಮ್ಮ ಬಾಂಧವರೆ ? ನಮ್ಮ ಜಾತಿಯವರೇ ನಮ್ಮ ಭರತಭೂಮಿಯನ್ನು ಜನ್ಮಭೂಮಿಯೆಂದು ಮನ್ನಿಸುವವರೆ? ಥ್ಯಾಕರೆಸಾಹೇಬರೆ, ಕಿತ್ತೂರು ಒಬ್ಬ ಮನುಷ್ಯ, ಒಂದು ಕುದುರೆ ಉಳಿಯುವವರೆಗೂ ನಿಮ್ಮೊಡನೆ ಕಾದುವುದು. ಈ ಚೆನ್ನಮ್ಮ ರಾಣಿಯಿಂದ ಈ ಜನ್ಮದಲ್ಲಿ ನಿಮ್ಮನ್ನು ಪರಾಭವಗೊಳಿಸುವುದು ಸಾಧ್ಯವಾಗದಿದ್ದರೆ, ಮತ್ತೊಂದು ಜನ್ಮವನ್ನು ಹೊತ್ತಾದರೂ ನಿಮ್ಮನ್ನು ಜಯಿಸುವಳು. ಭಾರತೀಯರು ನನ್ನನ್ನು ಅನುಸರಿಸಿ ಭವಿಷ್ಯಕಾಲದಲ್ಲಿಯಾದರೂ ಮಾತೃಭೂಮಿಯನ್ನು ಪರಕೀಯ ದಾಸ್ಯದಿಂದ ಮುಕ್ತಗೊಳಿಸಬಹುದು. ನನಗೆ ಜಯವು ದೊರೆಯುವದೆಂಬ ಉತ್ಕಟೇಚ್ಛೆಯಿಂದ ನಾನು ನಿಮ್ಮೊಡನೆ ಕಾದುವುದಿಲ್ಲ. ನನ್ನ ಉತ್ಕಟವಾದ ಧ್ಯೇಯವು ಭಾವೀ ಪೀಳಿಗೆಗೆ ಆದರ್ಶಭೂತವಾಗಬೇಕೆಂಬುದೇ ನನ್ನ ಅಭಿಲಾಷೆ. ಥ್ಯಾಕರೆ ಸಾಹೇಬರೆ, ಮೋಸಗಾರಿಕೆಯಿಂದ ರಾಜ್ಯ ಗಳಿಸತೊಡಗಿದ ನಿಮಗೆ ಚೆನ್ನಾಗಿ ಬುದ್ಧಿಗಲಿಸಬೇಕೆಂಬುದೇ ನಮ್ಮ

ಗುರಿಯಾಗಿದೆ. ”

“ ಈ ಥ್ಯಾಕರೆಯು ನಿಮ್ಮ ರಾಜ್ಯವನ್ನು ಕಂಪನಿ ಸರಕಾರಕ್ಕೆ ಕೂಡಿಸದೆ ಬಿಡಲಾರನೆಂದು ದೃಢವಾಗಿ ನಂಬಿರಿ, ರಾಣಿಯವರೆ! ನಾನು ಬದುಕುವ ಆಶೆಯನ್ನು ಬಿಟ್ಟು ಟೊಂಕಕಟ್ಟಿದ್ದೇನೆ. ”

“ ಬಹಳೇ ಚೆನ್ನಾಗಿ ಆಯಿತು. ನಿಮಗೆ ಬದುಕುವ ಆಶೆಯೂ ಇಲ್ಲ; ನಿಮ್ಮನ್ನು ಉಳಿಸುವ ಆಶೆಯೂ ನಮಗಿಲ್ಲ ! ಥ್ಯಾಕರೆ ಸಾಹೇಬರೆ, ನಿಮ್ಮನ್ನು ಕೊನೆಗೊಳಿಸಲು ಕಿತ್ತೂರ ವೀರರು ಸಮರ್ಥರಿರುವರು ! ”

ಚೆನ್ನಮ್ಮರಾಣಿಯು ಹೀಗೆ ನುಡಿದ ಕೂಡಲೆ ಥ್ಯಾಕರೆಯು ಅಲ್ಲಿಂದ ಎದ್ದು — “ ಒಳ್ಳೇದು. ನಿಮ್ಮ ಪಾರುಪತ್ಯವನ್ನು ಮಾಡಿಯೆ ಮುಂದಿನ ಕೆಲಸ ! ” ಎಂದು ಗರ್ಜಿಸಿ ಹೊರಟು ಹೋದನು.

ತರುವಾಯ ಚೆನ್ನಮ್ಮರಾಣಿಯು ಮಲ್ಲಪ್ಪಸೆಟ್ಟಿಗೂ, ವೆಂಕಟರಾಯರಿಗೂ ಅವರ ದೇಶದ್ರೋಹಿತನದ ಬಗ್ಗೆ ಎಚ್ಚರಿಕೆ ಕೊಟ್ಟಳು. ನಂತರ ಅವಳು ಪ್ರಧಾನಿಯನ್ನು ಕುರಿತು, “ ನೀವು ಎಲ್ಲ ಸೈನ್ಯವನ್ನು ಸಿದ್ಧಪಡಿಸಿರಿ. ರಾಯಣ್ಣ, ಬಾಲಣ್ಣ ಮೊದಲಾದ ವೀರರನ್ನು ಕರೆಯಿಸಿ ನಾಗರಿಕ ಸೈನ್ಯವನ್ನೂ ಕೂಡಿಸಲು ತಿಳಿಸಿರಿ. ಶಸ್ತ್ರಾಸ್ತ್ರ, ಮದ್ದುಗುಂಡುಗಳ ಸಿದ್ಧತೆಯನ್ನು ಮಾಡಿರಿ. ಥ್ಯಾಕರೆಯು ಬೇಗನೆ ಕಿತ್ತೂರ ಮೇಲೆ ದಾಳಿ ಮಾಡಬಹುದು. ಆದುದರಿಂದ ಬೇಗನೆ ಎಲ್ಲ ಸಿದ್ಧತೆ ಮಾಡಬೇಕು. ” ಎಂದು ಹೇಳಿದಳು.

ಕಂಪನಿಸರಕಾರವು ಧಾರವಾಡದ ಪೊಲಿಟಿಕಲ್ ಏಜಂಟರಾಗಿದ್ದ ಥ್ಯಾಕರೆಯ ಪತ್ರದ ಪರಿಶೀಲನೆ ನಡೆಯಿಸಿತ್ತು. ಕಿತ್ತೂರ ಮೇಲೆ ಯಾವ ಕ್ರಮ ಕೈಕೊಳ್ಳಬೇಕೆಂಬ ವಿಚಾರವನ್ನು ಇನ್ನೂ ಸ್ಪಷ್ಟಪಡಿಸಿದ್ದಿಲ್ಲ. ಉತಾವಳಿಯ ಸ್ವಭಾವದ ಥ್ಯಾಕರೆಗೆ ಈ ವಿಲಂಬವು ಸಹನವಾಗಲಿಲ್ಲ. ಸರಕಾರದ ಸಹಾಯವು ಬಾರದಿದ್ದರೂ ತನ್ನಲ್ಲಿಯ ಬಲವು ಕಿತ್ತೂರನ್ನು ವಶಪಡಿಸಿಕೊಳ್ಳಲು ಸಾಕಷ್ಟಿದೆಯೆಂದು ಅವನು ಭಾವಿಸಿದ್ದನು. ಅವನು ಮತ್ತೊಮ್ಮೆ ಪ್ರಯತ್ನ ಮಾಡಬೇಕೆಂಬ ಉದ್ದೇಶದಿಂದ ಕಾರಭಾರಿ ವೆಂಕಟರಾಯನೊಡನೆ ಒಂದು ರಾಯಸವನ್ನು ಕಳುಹಿಸಿದನು. ಮನ್ರೋ ಕರಾರಿನಂತೆ ಒಂದು ಲಕ್ಷ ಎಪ್ಪತ್ತೈದು ಸಾವಿರ ರೂಪಾಯಿ ಕೊಡಲೊಪ್ಪಿದರೆ ಕಿತ್ತೂರ ಸಂಸ್ಥಾನದ ಭಾಗ್ಯತೆ-ಯು ನಿಮಗೂ ನಿಮ್ಮ ವಂಶಕ್ಕೂ ಸ್ಥಿರವಾಗಿ ಉಳಿಯುವದೆಂದು ಅವನು ತಿಳಿಸಿದ್ದನು. ಅಲ್ಲದೆ ವೆಂಕಟರಾಯನನ್ನು ಕಂಪನಿಯ ಸರಕಾರದ ಪ್ರತಿನಿಧಿಯಾಗಿ ಓಲಗದಲ್ಲಿಟ್ಟುಕೊಳ್ಳಬೇಕೆಂದು ಅವನು ರಾಯಸದಲ್ಲಿ ಬರೆದಿದ್ದನು.

ಥ್ಯಾಕರೆಯ ರಾಯಸವನ್ನು ತೆಗೆದುಕೊಂಡು ಹೋದ ವೆಂಕಟರಾಯನು ರಾಣಿಯ ಔದಾರ್ಯದಿಂದಲೆ ಪಾರಾಗಿ ಬಂದನು. ಕಿತ್ತೂರ ಲಗದಲ್ಲಿ ಅವನು ಹೇಳಕೂಡದಷ್ಟು ಅಪಮಾನಹೊಂದಿದನು. ತ್ತೂರ ಸೀಮೆಯಲ್ಲಿ ಕಾಲಿಡಕೂಡದೆಂದು ಅವನಿಗೆ ಚೆನ್ನಮ್ಮ ಣಿಯು ತಿಳಿಸಿದಳು. ಅವನ ಮೇಲೆ ಸ್ವಾಮಿದ್ರೋಹದ ಅಪವಾ ವೂ ಹೊರಿಸಲ್ಪಟ್ಟಿತು. ವೆಂಕಟರಾಯನು ಮೋರೆಯನ್ನೊಣಗಿಸಿ ಂಡು ಥ್ಯಾಕರೆಯ ಬಳಿಗೆ ಬಂದು ಕಿತ್ತೂರ ಓಲಗದಲ್ಲಿಯ ಸಂಗ ಯನ್ನು ತಿಳಿಸಿದನು. ಚೆನ್ನಮ್ಮರಾಣಿಯು ಯುದ್ಧಕ್ಕೆ ಸಿದ್ಧಳಾದ

ಸಂಗತಿಯನ್ನೂ ತಿಳಿಸಿದನು. ವೆಂಕಟರಾಯನೂ, ಮಲ್ಲಪ್ಪಸೆಟ್ಟಿಯೂ ಕಿತ್ತೂರಲ್ಲಿಯ ಸೈನ್ಯಬಲ ಶಸ್ತ್ರಬಲ ಮೊದಲಾದ ಸಂಗತಿಗಳನ್ನು ತಿಳಿಸಿದ್ದರು. ಕಿತ್ತೂರ ದೇಶಗತಿಯಲ್ಲಿ ಸಮನಾಗಿ ಪಾಲನ್ನು ಮಾಡಿಕೊಂಡು ತೆಗೆದುಕೊಳ್ಳುವ ಹೊಂಚುಗಾರಿಕೆಯು ಮಲ್ಲಪ್ಪಸೆಟ್ಟಿ, ವೆಂಕಟರಾಯರದಾಗಿತ್ತು. ಕೋಟೆಯ ಮುಖ್ಯ ರಕ್ಷಕ ಶಿವಬಸಪ್ಪನು ಸ್ವತಂತ್ರವಾಗಿಯೆ ತನ್ನ ಕಾರಸ್ಥಾನ ನಡೆಯಿಸಿದ್ದನು. ಅವನು ವೆಂಕಟರಾಯನಿಗೂ, ಮಲ್ಲಪ್ಪಸೆಟ್ಟಿಗೂ ತನ್ನ ಮನೀಷೆಯನ್ನು ತಿಳಿಸದೆ, ಅವರ ಕಾರಸ್ಥಾನದಲ್ಲಿ ಸೇರ್ಪಡೆ ಹೊಂದಿದ್ದನು. ಥ್ಯಾಕರೆಯು ಎಲ್ಲರಿಗೂ ಆಶ್ವಾಸನೆ ಕೊಡುತ್ತ ತನ್ನ ಕಾರ್ಯವನ್ನು ಸಾಧಿಸುವುದರಲ್ಲಿ ನಿರತನಾಗಿದ್ದನು.

ತನ್ನ ಪ್ರತಿನಿಧಿಯಾಗಿ ಹೋಗಿದ್ದ ವೆಂಕಟರಾಯನಿಗೆ ಕಿತ್ತೂರ ರಾಣಿಯು ಅಪಮಾನ ಮಾಡಿ ಕಳಿಸಿದಳೆಂದು ಥ್ಯಾಕರೆಯು ಅಪರಿಮಿತವಾಗಿ ರೊಚ್ಚಿಗೆದ್ದನು. ಕೂಡಲೆ ಅವನು ಎರಡು ತೋಫುಗಳನ್ನೂ, ಅಶ್ವಸೈನ್ಯವನ್ನೂ, ಕಾಲಾಳುಗಳನ್ನೂ ತೆಗೆದುಕೊಂಡು ಕಿತ್ತೂರಿಗೆ ದಂಡೆತ್ತಿ ನಡೆದನು.

ಇಂಗ್ಲಿಷರ ದಂಡು ಕಿತ್ತೂರನ್ನು ಮುತ್ತಲು ಹೊರಟ ಸಂಗತಿಯು ಚೆನ್ನಮ್ಮರಾಣಿಗೆ ತಿಳಿಯಿತು. ಅವಳಾದರೂ ಸಾಕಷ್ಟು ಸಿದ್ಧತೆ ಮಾಡಿಕೊಂಡಿದ್ದಳು. ಅವಳು ಕೋಟೆಯ ಬಾಗಿಲನ್ನು ಮುಚ್ಚಿಸಿ ಒಳಮಗ್ಗಲು ಬಲವಾದ ಸೈನ್ಯವನ್ನು ನಿಲ್ಲಿಸಿದಳು. ಥ್ಯಾಕರೆಯ ದಂಡು ಕಿತ್ತೂರ ಕೋಟೆಗೆ ಮುತ್ತಿಗೆ ಹಾಕಿತು. ಥ್ಯಾಕರೆಯು ಚೆನ್ನಮ್ಮರಾಣಿಗೆ ಕೊನೆಯ ಸಂದೇಶವನ್ನು ಕಳಿಸಬೇಕೆಂದು ಯೋಚಿಸಿದನು. ಕಂಪನಿ ಸರಕಾರದ ಒಡೆತನವನ್ನು ಮನ್ನಿಸಿ, ಕಟ್ಟಳೆಯಂತೆ ನಡೆಯಲೊಪ್ಪಿದರೆ ತಾನೇ ತನ್ನ ಕೈಯಿಂದ ರಾಜಮುಕುಟ

ವನ್ನು ಅವಳ ತಲೆಯಮೇಲಿಡುವೆನೆಂದು ಅವನು ಚೆನ್ನಮ್ಮರಾಣಿಗೆ ಹೇಳಿಕಳಿಸಿದನು. ಎರಡು ದಿನಗಳಾದರೂ ಪ್ರತ್ಯುತ್ತರವು ಬರಲಿಲ್ಲ. ಆಗ ಅವನು ಕೋಟೆಯ ಮೇಲೆ ಕುದುರೆಯನ್ನೇರಿ ಸಂಚರಿಸುತ್ತಿದ್ದ ರಾಣಿಗೆ ಮತ್ತೆ ಸೂಚನೆ ಕಳುಹಿಸಿದನು. ಕೊನೆಯಲ್ಲಿ ಇಪ್ಪತ್ತು ನಿಮಿಷಗಳ ಅವಧಿ ಕೊಟ್ಟಿರುವೆನೆಂದು ತಿಳಿಸಿದನು. ಆದರೆ ರಾಣಿಯು ಅವನ ಬೆದರಿಕೆಗೆ ಸೊಪ್ಪು ಹಾಕದೆ, ' ಕಿತ್ತೂರು ಸ್ವತಂತ್ರವಾಗಿ ಉಳಿಯಬೇಕು, ಇಲ್ಲವೆ ಅಳಿಯಬೇಕು ' ಎಂದು ದೃಢವಾದ ಉತ್ತರವನ್ನು ಕೊಟ್ಟಳು.

ಚೆನ್ನಮ್ಮರಾಣಿಯ ಉತ್ತರದಿಂದ ಥ್ಯಾಕರೆಯು ಸಂತಪ್ತನಾದನು. ಅವನು ತೋಫುಖಾನೆಯ ಅಧಿಕಾರಿಯಾದ ಕ್ಯಾಪ್ಟನ್ ಬ್ಲ್ಯಾಕನಿಗೆ ಕೋಟೆಯ ಬಾಗಿಲಿಗೆ ತೋಫು ಹಾರಿಸಲು ಆಜ್ಞಾಪಿಸಿದನು. ಕೂಡಲೆ ತೋಫುಗಳು ಹಾರತೊಡಗಿದವು. ಕೋಟೆಯ ಬಾಗಿಲುಗಳು ಮುರಿದು ಹೋದವು. ಚೆನ್ನಮ್ಮರಾಣಿಯೂ, ಗುರುಸಿದ್ಧಪ್ಪನೂ, ರಾಯಣ್ಣನೂ ತಮ್ಮ ಸೈನ್ಯಕ್ಕೆ ಇಂಗ್ಲಿಷ್ ಸೈನ್ಯದ ಮೇಲೆ ಬೀಳಲು ಆಜ್ಞಾಪಿಸಿದರು. ತುಮುಲವಾದ ಸಂಗ್ರಾಮವು ನಡೆಯಿತು. ಇಂಗ್ಲಿಷರ ಸೈನ್ಯವು ಕಿತ್ತೂರ ವೀರರ ಕೈಯಲ್ಲಿ ಸಿಕ್ಕು ನುಗ್ಗುನುಗ್ಗಾಗತೊಡಗಿತು. ವೀರ ರಾಣಿ ಚೆನ್ನಮ್ಮನು ಕೋಟೆಯ ಮೇಲೆ ಅಶ್ವಾರೋಹಿಯಾಗಿ ಸಂಚರಿಸುತ್ತ ತನ್ನ ಸೈನ್ಯವನ್ನು ಹುರುದುಂಬಿಸುತ್ತಿದ್ದಳು. ಆಗ ಥ್ಯಾಕರೆಯು ತನ್ನ ತುಬಾಕಿಯಿಂದ ಚೆನ್ನಮ್ಮರಾಣಿಯನ್ನು ಹೊಡೆಯಬೇಕೆಂದು ಗುರಿಯಿಟ್ಟನು. ಅಂಗರಕ್ಷಕನಾದ ಬಾಳಾಸಾಹೇಬನು ಥ್ಯಾಕರೆಯ ಮನೋದಯವನ್ನರಿತನು. ಚೆನ್ನಮ್ಮರಾಣಿಯೂ ಗುರುತಿಸಿದಳು. ಆಗ ಅವಳು ಬಾಳಾಸಾಹೇಬನಿಗೆ— " ಈಗಲೆ ಥ್ಯಾಕರೆಯ ಮೇಲೆ ಗುಂಡು ಹಾರಿಸು! " ಎಂದು ಆಜ್ಞೆ ವಿಧಿಸಿದಳು. ಎಂದೂ

ಗುರಿ ತಪ್ಪದೆ ಹೊಡೆಯುವ ಕಲೆಯುಳ್ಳ ಬಾಳಾಸಾಹೇಬನು ಥ್ಯಾಕರೆಯ ಮೇಲೆ ಗುಂಡು ಹಾರಿಸಿದನು. ಕೂಡಲೆ ಥ್ಯಾಕರೆಯು ಕುದುರೆಯ ಮೇಲಿಂದ ಕೆಳಗೆ ಬಿದ್ದನು. ಪರಕ್ಷಣದಲ್ಲಿ ಚೆನ್ನಮ್ಮರಾಣಿಯ ಮೇಲೆ ಗುಂಡು ಹಾರಿಸಲ್ಪಟ್ಟಿತು. ಬಾಳಾಸಾಹೇಬನು ಆ ಗುಂಡಿಗೆ ಎದೆಗೊಟ್ಟು ರಾಣಿಯನ್ನು ಉಳಿಸಿದನು. ಗುಂಡಿನ ಪೆಟ್ಟಿನಿಂದ ಬಾಳಾಸಾಹೇಬನು ನೆಲಕ್ಕೆ ಬಿದ್ದು ಗತಾಸುವಾದನು. ಹೊಟ್ಟೆಯ ಮಗನಂತಿದ್ದ ಬಾಳಾಸಾಹೇಬನು ಮಡಿದದ್ದರಿಂದ ಚೆನ್ನಮ್ಮರಾಣಿಯು ದುಃಖಸಾಗರದಲ್ಲಿ ಮುಳುಗಿದಳು. ಆಗ ಶೋಕಿಸುತ್ತ ಕುಳತುಕೊಳ್ಳುವ ಸಮಯವಿರಲಿಲ್ಲ. ಅವಳು ಬಾಳಾಸಾಹೇಬನ ಶವವನ್ನು ರಕ್ಷಿಸಲು ವ್ಯವಸ್ಥೆ ಮಾಡಿ ತನ್ನ ಸೈನಿಕರನ್ನು ಹುರುದುಂಬಿಸತೊಡಗಿದಳು.

ಥ್ಯಾಕರೆಯು ಬಿದ್ದ ಬಳಿಕ ಚೆನ್ನಮ್ಮನ ಏಕನಿಷ್ಠ ಸೇವಕನಾದ ಆಫ್ರಿಕೆಯ ರಾಮು ಹಬಸಿಯು ಥ್ಯಾಕರೆಯ ಶಿರವನ್ನು ಬರ್ಚಿಗೆ ಚುಚ್ಚಿ ಮೆರೆಯಿಸಿದನು. ಕ್ಯಾಪ್ಟನ್ ಬ್ಲ್ಯಾಕ, ಲೆಫ್ಟೆನೆಂಟ ಡಿಗ್ಬನ್‌ರು ಯುದ್ಧದಲ್ಲಿ ಮಡಿದರು. ಥ್ಯಾಕರೆಯ ಸಹಾಯಕರಾದ ಸ್ಟೀವನ್ಸನ್, ಇಲಿಯಟ್ ಮೊದಲಾದವರು ರಾಣಿಯ ಸೆರೆಯಾಳಾದರು. ಅವಳು ಸ್ವಾಮಿದ್ರೋಹಿ ವೆಂಕಟರಾಯನನ್ನೂ, ಮಲ್ಲಪ್ಪಸೆಟ್ಟಿಯನ್ನೂ ಸೆರೆ ಹಿಡಿಯಿಸಿ ಬಲವಾದ ಕಾವಲಿನಲ್ಲಿರಿಸಿದಳು.

ಕಿತ್ತೂರ ವೀರಸೈನಿಕರು, 'ಹರಹರ ಮಹಾದೇವ' ಎಂದು ಗರ್ಜಿಸುತ್ತ ಶತ್ರುಸೈನ್ಯದಲ್ಲಿ ಅಂತಕನ ಕೋಲಾಹಲವನ್ನೇ ನಡೆಯಿಸಿದರು. ರಾಯಣ್ಣ, ಬಾಲಣ್ಣ ಮೊದಲಾದವರು ಜೀವದ ಹಂಗು ದೊರೆದು ಹೋರಾಡಿದರು. ಚೆನ್ನಮ್ಮರಾಣಿಯೂ, ಗುರುಸಿದ್ಧಪ್ಪನೂ ವೈರಿದಳವನ್ನು ಹೊಕ್ಕು ಅದನ್ನು ನಾಮಶೇಷ ಮಾಡಿದರು. ಕಿತ್ತೂರ

ಸೈನಿಕರು ಜಯಜಯಕಾರ ಧ್ವನಿಗೈಯುತ್ತ ಕೋಟೆಯಲ್ಲಿ ಪ್ರವೇಶಿಸಿದರು. ಶತ್ರುಗಳ ಶಸ್ತ್ರಾಸ್ತ್ರಗಳನ್ನು ಕಿತ್ತೂರ ಸೈನಿಕರು ವಶಪಡಿಸಿಕೊಂಡರು.

ಬಾಳಾಸಾಹೇಬನ ಮರಣವು ಕಿತ್ತೂರವರಿಗೆಲ್ಲ ಕ್ಲೇಶದಾಯಕವಾಯಿತು. ಮುಪ್ಪಿನ ತಂದೆಯಾದ ಸೈದನಸಾಹೇಬನು ಕಣ್ಣೀರು ಹಾಕುತ್ತಿದ್ದರೂ, ತನ್ನ ಮಗನು ಮಾತೃಭೂಮಿಗಾಗಿ ಪ್ರಾಣನೀಗಿ ಸದ್ಗತಿಯನ್ನು ಪಡೆದನೆಂದು ಉದ್ಗಾರ ತೆಗೆದನು! ಬಾಳಾಸಾಹೇಬನ ಶವವನ್ನು ವೀರೋಚಿತವಾದ ಮರ್ಯಾದೆಯಿಂದ ಮೆರವಣಿಗೆ ಮಾಡಿಸಿ ಅಂತ್ಯಸಂಸ್ಕಾರ ನೆರವೇರಿಸಲ್ಪಟ್ಟಿತು. ಎಲ್ಲರೂ ಬಾಳಾಸಾಹೇಬನ ಸಮಾಧಿಗೆ ನಮಸ್ಕಾರ ಮಾಡಿದರು. ಚೆನ್ನಮ್ಮರಾಣಿಯೂ; ದೇಶಸೇವೆ ಮಾಡುತ್ತ ಪ್ರಾಣನೀಗಿದ ವೀರಕುಮಾರನನ್ನು ಮನಸ್ವಿಯಾಗಿ ಹೊಗಳಿ ಅವನ ಸಮಾಧಿಗೆ ಪ್ರಣಾಮ ಮಾಡಿದಳು.

## ೧೨

ಕಿತ್ತೂರ ರಾಜ್ಯದ ಪ್ರಜೆಗಳು ವಿಜಯಾನಂದದಲ್ಲಿ ತಲ್ಲೀನರಾಗಿದ್ದರು. ಆದರೆ ಚೆನ್ನಮ್ಮರಾಣಿಯು ಈ ವಿಜಯದಿಂದ ಮೈ ಮರೆಯಲಿಲ್ಲ. ಅವಳು ತನ್ನ ಜನರನ್ನು ಭಾವೀಯುದ್ಧಕ್ಕೆ ಅಣಿಗೊಳಿಸತೊಡಗಿದಳು. ಅಪಜಯದಿಂದ ಅಪಮಾನ ಹೊಂದಿದ ಇಂಗ್ಲಿಷರು ದೊಡ್ಡ ದಂಡಿನೊಡನೆ ದಾಳಿಮಾಡುವರೆಂಬ ಸಂಗತಿಯನ್ನು ಅವಳು ತನ್ನ ಸೈನ್ಯಕ್ಕೂ, ರಾಜಕರ್ಮಚಾರಿಗಳಿಗೂ, ಪ್ರಜೆಗಳಿಗೂ ತಿಳಿಸಿದಳು. ಸ್ವಾತಂತ್ರ್ಯ ಯುದ್ಧಕ್ಕಾಗಿ ನೆರವಾಗಬೇಕೆಂದು ಅವಳು ನಿಪ್ಪಾಣಿ, ಸಾತಾರೆ, ಕೊಲ್ಹಾಪುರ ಮೊದಲಾದ ಅನೇಕ ಸಂಸ್ಥಾನಿಕರಿಗೆ ಹೇಳಿ

ಕಳುಹಿದಳು. ಆದರೆ ಅವಳ ಎಣಿಕೆಯಂತೆ ಸಹಾಯವು ದೊರೆಯಲಿಲ್ಲ. ಬಲಾಢ್ಯರಾದ ಇಂಗ್ಲಿಷರೊಡನೆ ಕಾದಲು ಬಹುಜನರು ಧೈರ್ಯ ಮಾಡಲಿಲ್ಲ. ಕಿತ್ತೂರಿನ ಕಲಿಗಳು ಮಾತ್ರ ಎದೆಗುಂದದೆ ಯುದ್ಧಕ್ಕೆ ಸಿದ್ಧರಾದರು.

ಚೆನ್ನಮ್ಮರಾಣಿಯು ಕೈಸೆರೆ ಸಿಕ್ಕ ಇಂಗ್ಲಿಷರನ್ನು ಬಹಳೇ ಪ್ರೇಮದಿಂದ ನಡೆಯಿಸಿಕೊಂಡಳು. ಅವರಿಗೆ ಯಾವ ತೊಂದರೆಯನ್ನೂ ಉಂಟುಮಾಡಲಿಲ್ಲ. ತಮಗೆ ಸಾವು ಬಂದಿತೆಂದೇ ತಿಳಿದುಕೊಂಡ ಇಂಗ್ಲಿಷ ಸೆರೆಯಾಳುಗಳು ರಾಣಿಯ ಔದಾರ್ಯವನ್ನು ಬಹುಪರಿಯಾಗಿ ಹೊಗಳಿ ಸಂತುಷ್ಟರಾದರು. ರಾಷ್ಟ್ರದ್ರೋಹವೆಸಗಿದ ಮಲ್ಲಪ್ಪಸೆಟ್ಟಿ ಹಾಗು ವೆಂಕಟರಾಯ ಇವರಿಬ್ಬರಿಗೆ ದೇಹಾಂತ ಶಾಸನವು ವಿಧಿಸಲ್ಪಟ್ಟಿತು. ಮಲ್ಲಪ್ಪಸೆಟ್ಟಿಯ ಕಾರಸ್ಥಾನವು ಸಿದ್ಧವಾಯಿತು. ಅವನ ಕೆಲವು ಗುಪ್ತದ ಪತ್ರಗಳು ಗುರುಸಿದ್ಧಪ್ಪನ ಸ್ವಾಧೀನವಾಗಿದ್ದವು. ಇದಲ್ಲದೆ ಚೆನ್ನಮ್ಮರಾಣಿಗೆ ಹಾಗು ರಾಜಮನೆತನದ ಜನರಿಗೆ ವಿಷಪ್ರಯೋಗ ಮಾಡಲು ಹೊಂಚುಹಾಕಿದ ಕಾರಸ್ಥಾನವೂ ಸಿದ್ಧವಾಗಿತ್ತು. ಆದುದರಿಂದ ಮಲ್ಲಪ್ಪಸೆಟ್ಟಿಗೂ, ವೆಂಕಟರಾಯನಿಗೂ ಕ್ಷಮೆ ದೊರೆಯಲಿಲ್ಲ. ಅವರಿಬ್ಬರನ್ನೂ ಆನೆಯ ಕಾಲಿಗೆ ಕಟ್ಟಿ ಕೊಲ್ಲಿಸಲಾಯಿತು !

ಚೆನ್ನಮ್ಮರಾಣಿಯು ಓಲಗವನ್ನು ನೆರೆಯಿಸಿದಳು. ಥ್ಯಾಕರೆಯ ಮರಣದಿಂದ ಸಂತಪ್ತರಾದ ಇಂಗ್ಲಿಷರು ದೊಡ್ಡ ಸೈನ್ಯದೊಡನೆ ಬಂದು ಕಿತ್ತೂರನ್ನು ಮುತ್ತುವರೆಂಬುದು ಎಲ್ಲರಿಗೂ ತಿಳಿದಿತ್ತು. ಈ ಬಗ್ಗೆ ಜನಾಭಿಪ್ರಾಯ ತಿಳಿದುಕೊಳ್ಳುವದೇ ರಾಣಿಯ ಉದ್ದೇಶವಾಗಿತ್ತು. ರಣದಲ್ಲಿ ಮರಣವೊದಗಿದರೂ ಚಿಂತೆಯಿಲ್ಲ, ಶತ್ರುಗಳಿಗೆ ಶರಣು ಹೋಗಬಾರದೆಂಬುದೇ ಚೆನ್ನಮ್ಮರಾಣಿಯ ಉದ್ದೇಶವಾಗಿತ್ತು. ಪರಕೀಯರ ದಾಸ್ಯಕ್ಕಿಂತ ಮರಣವೇ ಮೇಲೆಂದು ಅವಳು

ತನ್ನ ಅಭಿಪ್ರಾಯವನ್ನು ಎಲ್ಲರಿಗೂ ತಿಳಿಸಿದಳು. ಗುರುಸಿದ್ಧಪ್ಪ, ರಾಯಣ್ಣ, ಬಾಲಣ್ಣ ಮೊದಲಾದ ವೀರರು ರಾಣಿಯ ಮತವನ್ನು ಅಂಗೀಕರಿಸಿದರು. ಎಲ್ಲ ಯೋಧರೂ ಪ್ರಾಣವನ್ನೇ ಪಣಕ್ಕಿಟ್ಟು ಹೋರಾಡುವೆವೆಂದು ಪ್ರತಿಜ್ಞೆ ಮಾಡಿದರು. ತರುವಾಯ " ಕಿತ್ತೂರಿಗೆ ಜಯವಾಗಲಿ, ಸ್ವಾತಂತ್ರ್ಯದೇವಿ ಚೆನ್ನಮ್ಮರಾಣಿಗೆ ಜಯವಾಗಲಿ ! " ಎಂದು ಘೋಷಣೆ ಮಾಡಿದರು.

ಥ್ಯಾಕರೆಯ ಮೃತಿಯಿಂದ ಸಂತಪ್ತರಾದ ಇಂಗ್ಲಿಷರು ದಕ್ಷಿಣ ಮಹಾರಾಷ್ಟ್ರದ ಕಮಿಶನರನಾದ ಚ್ಯಾಪ್ಲಿನ್‌ನನ್ನು ದೊಡ್ಡ ಸೈನ್ಯದೊಡನೆ ಕಿತ್ತೂರಿಗೆ ಕಳುಹಿಸಿದರು. ಕರ್ನಸೇಲಿಯ ನೇತೃತ್ವದಲ್ಲಿ ಮುಂಬಯಿಯ ಕಾಲ್ದಳವು ಬಂದಿತು. ಲೆಫ್ಟಿನಂಟ ಕರ್ನಲ್ ಡೀಕನ್ನನ ನಾಯಕತ್ವದಲ್ಲಿ ಮತ್ತೊಂದು ಸೈನ್ಯವು ಕಿತ್ತೂರಿಗೆ ಬಂದಿಳಿಯಿತು. ಮೇಜರ ಮ್ಯಾಕಲಿಯೋಡ, ಮೇಜರ ಟ್ರೂಮನ್ನರ ಕೈಕೆಳಗೆ ಫಿರಂಗಿಗಳ ಸೈನ್ಯವೂ ಕಿತ್ತೂರಿಗೆ ಬಂದು ಸೇರಿತು. ಮದ್ರಾಸದಿಂದಲೂ ಮೈಸೂರಿನಿಂದಲೂ ಸೈನ್ಯವು ಬಂದಿತು. ಐತಿಹಾಸಿಕ ಪ್ರಸಿದ್ಧವಾದ ಶ್ರೀರಂಗಪಟ್ಟಣದ ಮುತ್ತಿಗೆಗೆ ಕೂಡದಷ್ಟು ಸೈನ್ಯವು ಸಣ್ಣ ಕಿತ್ತೂರ ನಾಶಕ್ಕಾಗಿ ಬಂದಿತ್ತು.

ಒಂದು ರಾತ್ರಿ ಕೋಟೆಯ ರಕ್ಷಕನಾದ ಶಿವಬಸಪ್ಪನು ಚ್ಯಾಪ್ಲಿನ ಸಾಹೇಬನ ಬಳಿಗೆ ಗುಪ್ತವಾಗಿ ಬಂದು, ಕೋಟೆಯನ್ನು ನಿಮ್ಮ ವಶವಾಗುವಂತೆ ಮಾಡುವೆನೆಂದು ಒಪ್ಪಿಕೊಂಡನು. ತನ್ನ ಪರಿಶ್ರಮಕ್ಕೆ ಪ್ರತಿಫಲವಾಗಿ ಕಿತ್ತೂರ ದೇಸಗತಿಯನ್ನು ತನ್ನ ವಶದಲ್ಲಿ ಕೊಡಬೇಕೆಂದು ಕೇಳಿಕೊಂಡನು. ಚ್ಯಾಪ್ಲಿನ್ನನು ಶಿವಬಸಪ್ಪನ ಹೇಳಿಕೆಯಂತೆ ನಡೆಯಲೊಪ್ಪಿದನು. ತರುವಾಯ ಅವನು ಇಂಗ್ಲಿಷ ಸೆರೆಯಾಳುಗಳನ್ನು ಬಂಧಮುಕ್ತಗೊಳಿಸಲು ರಾಣಿಗೆ ತಿಳಿಸಿದನು ಇಪ್ಪತ್ತುನಾಲ್ಕು

ತಾಸಿನೊಳಗಾಗಿ ಶರಣು ಬಂದು, ತಮ್ಮ ಕಟ್ಟಳೆಯಂತೆ ನಡೆಯಲೊಪ್ಪಿದರೆ, ಸಂಸ್ಥಾನದ ಒಡೆತನವು ಸ್ಥಿರವಾಗಿ ಉಳಿಯುವದೆಂಬ ನಿರೋಪವೂ ಕಳಿಸಲ್ಪಟ್ಟಿತು.

ಇಂಗ್ಲಿಷರ ದಾಸ್ಯದಲ್ಲಿರುವದಕ್ಕಿಂತ ವೀರಮರಣವೇ ಲೇ-ಸೆಂದು ದೃಢಪಡಿಸಿಕೊಂಡಿದ್ದ ಕಿತ್ತೂರ ಸ್ವಾತಂತ್ರ್ಯದೇವತೆ ಚೆನ್ನಮ್ಮರಾಣಿಯು ಅದರಂತೆಯೆ ಹೇಳಿಕಳುಹಿಸಿದಳು. ಆದರೆ ಸೆರೆಯಲ್ಲಿ ಸಿಕ್ಕ ಸ್ಟೀವನ್‌ಸನ್, ಇಲಿಯಟ್ ಮೊದಲಾದ ಇಂಗ್ಲಿಷರನ್ನು ಅವಳು ಬಿಡುಗಡೆ ಮಾಡುವದಕ್ಕೆ ಒಪ್ಪಿಕೊಂಡಳು. ಅದರಂತೆ ರಾಣಿಯು ಸೆರೆಯಾಳುಗಳನ್ನು ಸುರಕ್ಷಿತವಾಗಿ ವೈರಿಗಳ ವಶಮಾಡಿದಳು. ಸೆರೆಯಾಳುಗಳು ಬಿಡುಗಡೆ ಹೊಂದಿ ಬಂದ ಕೂಡಲೆ ಇಂಗ್ಲಿಷ ಫಿರಂಗಿಗಳು ಪ್ರಾರಂಭವಾದವು. ತೋಫಿನ ದೊಡ್ಡ ಗುಂಡುಗಳಿಂದ ಕೋ-ಟೆಯ ಗೋಡೆಯು ಉಧ್ವಸ್ತವಾಗತೊಡಗಿತು. ಕಿತ್ತೂರ ಕೋಟೆಯೊಳಗಿನ ಮದ್ದಿನ ಆಗರಕ್ಕೆ ಶಿವಬಸಪ್ಪನು ಎಣ್ಣೆ, ಸಗಣಿ, ರಾಗಿಗಳನ್ನು ಸುರುವಿಸಿ ಹಾಳು ಮಾಡಿದ್ದನು. ಕಿತ್ತೂರ ತೋಫುಗಳು ಹಾರಲಿಲ್ಲ. ಆದರೂ ರಾಣಿಯು ಎದೆಗುಂದಲಿಲ್ಲ. ಕಿತ್ತೂರ ಕಲಿಗಳು ಹಿಂದೆ ಸರಿಯಲಿಲ್ಲ. ಕೋಟೆಯಲ್ಲಿದ್ದ ಹದಿನಾರು ಸಾವಿರ ಯೋಧರು ಹೊರಬಿದ್ದು ಇಂಗ್ಲಿಷ್ ಸೈನ್ಯದ ಮೇಲೆ ಬಿದ್ದರು. ತುಮುಲವಾದ ಯುದ್ಧವು ನಡೆಯಿತು. ಚೆನ್ನಮ್ಮರಾಣಿಯೂ, ಗುರುಸಿದ್ದಪ್ಪನೂ, ರಾಯಣ್ಣ, ಗಜವೀರ ಬಾಲಣ್ಣ, ರಾಮ ಹಬಸಿ ಮೊದಲಾದ ವೀರರೂ ಜೀವದ ಹಂಗುದೊರೆದು ಕಾದಿದರು.

ಕ್ರಿ. ಶ. ೧೮೨೪, ಡಿಸೆಂಬರ ೫ನೆಯ ದಿನಾಂಕವು ಕಿತ್ತೂರಿಗೆ ದುರ್ದಿನವಾಗಿ ಪರಿಣಮಿಸಿತು. ತೋಫುಖಾನೆಯ ಇಂಗ್ಲಿಷ ಸೈನ್ಯಕ್ಕೆ ಕಿತ್ತೂರ ಕಲಿಗಳು ಈಡಾಗಲಿಲ್ಲ. ಅಂದು ಕಿತ್ತೂರ ಸೈನ್ಯವು ಬಹಳ

ವಾಗಿ ನಾಶವಾಯಿತು. ಇಂಗ್ಲಿಷರು ಕೋಟೆಯಲ್ಲಿ ನುಗ್ಗಿದರು. ಗುರುಸಿದ್ಧಪ್ಪ, ರಾಯಣ್ಣ ಮೊದಲಾದ ಸ್ವಾಮಿನಿಷ್ಠರು ರಾಣಿಯನ್ನು ಗುಪ್ತಮಾರ್ಗದಿಂದ ದಾಟಿಸಲು ಸಾಹಸ ಮಾಡಿದರು. ಕೊನೆಗೆ ಎಲ್ಲರ ಪ್ರಯತ್ನಗಳೂ ನಿಷ್ಫಲವಾಗಿ ಚೆನ್ನಮ್ಮರಾಣಿ, ವೀರಮ್ಮರಾಣಿ, ಚಿಕ್ಕದೇಸಾಯಿ ಮೊದಲಾದ ರಾಜಪರಿವಾರದವರೂ, ಗುರುಸಿದ್ಧಪ್ಪ ಮೊದಲಾದ ಸ್ವಾಮಿನಿಷ್ಠರೂ ಇಂಗ್ಲಿಷರ ವಶರಾದರು. ರಾಯಣ್ಣ ಮೊದಲಾದ ವೀರರು ಕಿತ್ತೂರಿನ ಪುನರುದ್ಧಾರ ಮಾಡುವ ಮಹತ್ವಾಕಾಂಕ್ಷೆಯಿಂದ ಅಲ್ಲಿಂದ ಗುಪ್ತವಾಗಿ ಪಾರಾಗಿಹೋದರು.

ಮೂರನೆಯ ದಿನ ಸೆರೆಯಲ್ಲಿ ಸಿಲುಕಿದ ಗುರುಸಿದ್ಧಪ್ಪ ಮೊದಲಾದ ಸ್ವಾಮಿನಿಷ್ಠರನ್ನು ಇಂಗ್ಲಿಷರು ಗಲ್ಲಿಗೇರಿಸಿದರು. ಚೆನ್ನಮ್ಮರಾಣಿ, ವೀರವ್ವರಾಣಿ ಬಾಲರಾಜ ಸವಾಯಿ ಮಲ್ಲಸರ್ಜ ದೇಸಾಯಿ ಮೊದಲಾದವರನ್ನು ಬೈಲಹೊಂಗಲ ಕೋಟೆಯಲ್ಲಿ ಸೆರೆಯಿರಿಸಿದರು. ಕಿತ್ತೂರ ನಿಶಾನೆಯು ಕಿತ್ತೂರ ಕೋಟೆಯಿಂದ ಕಿತ್ತಲ್ಪಟ್ಟು ಇಂಗ್ಲಿಷರ ಯೂನಿಯನ್‌ಜಾಕ್ ನಿಲ್ಲಿಸಲ್ಪಟ್ಟಿತು ! ಕಿತ್ತೂರಿನ ಸ್ವಾತಂತ್ರ್ಯರವಿಯು ಅಂದು ಅಸ್ತಂಗತನಾದನು !!

ಕಿತ್ತೂರ ಕೋಟೆಯ ರಕ್ಷಕನಾದ ಶಿವಬಸಪ್ಪನು ಚ್ಯಾಪ್ಲಿನ್ ಸಾಹೇಬನ ಬಳಿಗೆ ಬಂದು ವಂದನೆಗಳನ್ನರ್ಪಿಸಿ, ತಾನು ಮಾಡಿದ ಸಾಹಸದ ಕಾರ್ಯಗಳನ್ನೆಲ್ಲ ವಿವರವಾಗಿ ತಿಳಿಸಿದನು. ಮದ್ದಿನಲ್ಲಿ ಎಣ್ಣೆ ಕೂಡಿಸುವ ಕಾರ್ಯವನ್ನು ಎಷ್ಟು ಸಾಹಸದಿಂದ ಮಾಡಿದೆನೆಂಬುದನ್ನೂ ಬಣ್ಣಿಸಿ ಹೇಳಿಕೊಂಡನು. ತನ್ನ ಈ ಮಹತ್ಕಾರ್ಯಕ್ಕಾಗಿ ಕಿತ್ತೂರ ದೇಶಗತಿಯು ದೊರೆಯಬೇಕೆಂದು ವಿನಂತಿಸಿದನು.

ಶಿವಬಸಪ್ಪನ ಮಾತು ಕೇಳಿ ಚ್ಯಾಪ್ಲಿನನು— " ಶಿವಬಸಪ್ಪನವರೆ, ನಿಮಗೆ ನಮ್ಮ ಕರಾರಿನಂತೆ ಬಹುಮಾನವು ದೊರೆಯುತ

ಕ್ಕದ್ದೇ. ಆದರೆ ನೀವು ಯಾರ ಅನ್ನವನ್ನು ಉಂಡು ಅವರಿಗೇ ಎರಡು ಬಗೆದಿರೋ ಆ ಬಗ್ಗೆ ಸ್ವಾತಂತ್ರ್ಯದೇವಿ ಚೆನ್ನಮ್ಮರಾಣಿಯವರ ಪರವಾಗಿ ವಿಚಾರಣೆಯಾಗುವದು ಅಗತ್ಯ. ರಾಣಿಯವರು ನಮಗೆ ವೈರಿಗಳೇನೋ ನಿಜ. ಅವರು ತಮ್ಮ ಕರ್ತವ್ಯವನ್ನು ಮಾಡಿದ್ದಾರೆ. ಆದರೆ ಅವರು ಸೆರೆಯಲ್ಲಿದ್ದರೂ ಅವರ ಬಗ್ಗೆ ನೀವು ಮಾಡಿದ ಸ್ವಾಮಿದ್ರೋಹದ ವಿಚಾರಣೆ ಮಾಡುವದು ನಮ್ಮ ಕಂಪನಿ ಸರಕಾರದ ನಿಯಮದಂತೆ ಅಗತ್ಯವಿದೆ. ಶಿವಬಸಪ್ಪನವರೆ, ದೇಶದ ಸ್ವಾತಂತ್ರ್ಯಕ್ಕಾಗಿ ಬಾಧ್ಯಸ್ತಳಾದ ರಾಣಿಯೆ ಪ್ರಾಣ ನೀಗಲು ಸಿದ್ಧಳಾದಾಗ, ಅವಳ ಸ್ವತ್ತನ್ನು ಅಪಹರಿಸಬೇಕೆನ್ನುವ ದೇಶದ್ರೋಹಗಳಿಗೆ ದೇಹಾಂತ ಪ್ರಾಯಶ್ಚಿತ್ತವೇ ಯೋಗ್ಯವು ! ”

ಶಿವಬಸಪ್ಪನು ಗಾಬರಿಗೊಂಡು, ಚ್ಯಾಪ್ಲಿನ್ ಸಾಹೇಬನ ಚರಣಗಳಿಗೆ ಮಸ್ತಕವಿರಿಸಿ, ರೋದಿಸುತ್ತ ದೈನ್ಯದಿಂದ ಬೇಡಿಕೊಳ್ಳತೊಡಗಿದನು. ತನಗೆ ದೇಸಗತಿಯು ದೊರೆಯದಿದ್ದರೂ ಪ್ರಾಣದಾನ ಮಾಡಬೇಕೆಂದು ಹೇಳಿಕೊಂಡನು. ಅವನ ಪ್ರಾರ್ಥನೆಯು ಮನ್ನಿಸಲ್ಪಡಲಿಲ್ಲ. ಅಂದೇ ದೇಸಾಯಿಯಾಗಬಯಸಿದ್ದ ಶಿವಬಸಪ್ಪನು ಕಿತ್ತೂರ ಕೋಟೆಯಲ್ಲಿಯೆ ತೋಫಿಗೆ ಆಹುತಿಯಾದನು !

ಇಂಗ್ಲಿಷರು ಕಿತ್ತೂರ ಬೊಕ್ಕಸದೊಳಗಿನ ಹೇರಳ ಸಂಪತ್ತನ್ನು ಕೈವಶಮಾಡಿಕೊಂಡು ಅಲ್ಲಿಂದ ಪಯಣ ಬೆಳೆಯಿಸಿದರು. ರಾಣಿಗೆ ಪ್ರತಿವರ್ಷಕ್ಕೆ ಮೂವತ್ತು ಸಾವಿರದ ಏಳುನೂರು ರೂಪಾಯಿ ಉಂಬಳಿಯನ್ನು ಕೊಡಬೇಕೆಂದು ಗೊತ್ತಾಯಿತು. ಕಿತ್ತೂರ ಸ್ವಾತಂತ್ರ್ಯದೇವಿಯಾದ ಚೆನ್ನಮ್ಮರಾಣಿಯುಬೈಲಹೊಂಗಲದ ಕೋಟೆಯಲ್ಲಿ ಇಂಗ್ಲಿಷರ ಸೆರೆಯಾಳಾಗಿ ಬಾಳಬೇಕಾಯಿತು ! ವಿಧಿಯ ಸಂಕಲ್ಪ !!

ದೇಶದ್ರೋಹ ಬಗೆದುದಕ್ಕಾಗಿ ಶಿವಬಸಪ್ಪನಿಗೆ ದೇಹಾಂತ ಪ್ರಾಯಶ್ಚಿತ್ತ ದೊರೆಯಿತು. ಸೆರೆಸಿಕ್ಕ ಗುರುಸಿದ್ದಪ್ಪನೇ ಮೊದಲಾದ ಕಿತ್ತೂರಿನ ಏಕನಿಷ್ಠ ಸೇವಕರಾಗಿದ್ದ ಇಪ್ಪತ್ತು ಜನ ವೀರರಿಗೆ ಬೆಳಗಾವಿಯಲ್ಲಿ ಗಲ್ಲಿನ ಶಿಕ್ಷೆಯಾಯಿತು! ದೇಶದ್ರೋಹಕ್ಕೂ ಶಿಕ್ಷೆ, ದೇಶನಿಷ್ಠೆಗೂ ಶಿಕ್ಷೆ! ಕಂಪನಿ ಸರಕಾರದ ರಾಜನೀತಿಯು ಇದೇ ಮಾದರಿಯಿಂದ ಸಾಗಿ ತನ್ನ ವರ್ಚಸ್ಸನ್ನು ಭಾರತದ ತುಂಬ ಪಸರಿಸಹತ್ತಿತು.

ಚೆನ್ನಮ್ಮರಾಣಿಯು ಕಿತ್ತೂರ ಕೋಟೆಯಲ್ಲಿ ಭದ್ರವಾದ ಕಾವಲಿನಲ್ಲಿದ್ದಳು. ಅವಳ ಅಳಿದುಳಿದ ಏಕನಿಷ್ಠ ಸೇವಕರಲ್ಲಿಯ ರಾಯಣ್ಣ, ಬಾಲಣ್ಣ ಮೊದಲಾದ ಪ್ರಮುಖರು ಕಿತ್ತೂರ ಸಂಸ್ಥಾನವನ್ನು ಮರಳಿ ಸ್ಥಾಪಿಸುವ ಸಾಹಸ ನಡೆಯಿಸಿದ ಸಂಗತಿಯು ರಾಣಿಗೆ ಗುಪ್ತವಾಗಿ ತಿಳಿದಿತ್ತು. ಅವಳಾದರೂ ಗುಪ್ತವಾಗಿ ತನ್ನ ಜನರನ್ನು ಪ್ರೋತ್ಸಾಹಿಸುತ್ತಿದ್ದಳು. ಬೈಲಹೊಂಗಲ ಕೋಟೆಯಲ್ಲಿ ಭದ್ರವಾದ ಕಾವಲಿನಲ್ಲಿದ್ದರೂ ಆ ವೀರ ವನಿತೆ ಸ್ವಾತಂತ್ರ್ಯ ಸಂಪಾದನೆಗಾಗಿ ತಪಶ್ಚರ್ಯ ನಡೆಯಿಸಿದ್ದಳು. ಚೆನ್ನಮ್ಮನ ಲಿಂಗಾರ್ಚನೆಗಾಗಿ ಜಂಗಮ ವೇಷದಲ್ಲಿ ರಾಯಣ್ಣನು ರಾಣಿಗೆ ಭೆಟ್ಟಿಯಾಗಿ ತಾನು ಕೈಕೊಂಡ ಸಾಹಸದ ಕೆಲಸಗಳ ಬಗೆಗೆ ತಿಳಿಸಿದ್ದನು. ರಾಣಿಯು ರಾಯಣ್ಣನ ಹಾಗು ಅವನ ಅನುಯಾಯಿಗಳ ಮೇಲೆ ಭರವಸೆಯಿಟ್ಟು ಜೀವಧಾರಣೆ ಮಾಡಿದ್ದಳು. ಅವಳು ಸ್ವಾತಂತ್ರ್ಯದ ಆದರ್ಶದೇವತೆಯಾಗಿದ್ದಳು. ಇಂಗ್ಲಿಷರಿಗೆ ಶರಣು ಹೋಗಿ ಒಪ್ಪಂದ ಮಾಡಿಕೊಂಡಿದ್ದರೆ ಅವಳು ತನ್ನ ಸಂಸ್ಥಾನವನ್ನು ಉಳಿಸಿಕೊಳ್ಳಬಹುದಾಗಿತ್ತು. ಆದರೆ ವಿದೇಶೀಯರ ದಾಸ್ಯದಲ್ಲಿರುವಕ್ಕಿಂತ ಮರಣವೇ ಮೇಲೆಂದು ಅವಳು ಭಾವಿಸಿದ್ದಳು.

ರಾಯಣ್ಣನ ಹಾಗು ಅವನ ಸಂಗಡಿಗರ ಚಟುವಟಿಕೆಗಳು ಭರದಿಂದ ಸಾಗಿದ್ದುದು ಇಂಗ್ಲಿಷರಿಗೆ ಗೊತ್ತಾಯಿತು. ಆಗ ಅವರು ಚಿಕ್ಕ ದೇಸಾಯಿಯನ್ನೂ, ವೀರವ್ವರಾಣಿಯನ್ನೂ ಬೈಲಹೊಂಗಲದಿಂದ ಕುಸುಗಲ್ಲಿಗೆ ಕಳುಹಿಸಿದರು. ರಾಜಮನೆತನದವರನ್ನು ಬಿಗಿಯಾದ ಕಾವಲಿನಲ್ಲಿಟ್ಟಿದ್ದರೂ ಇಂಗ್ಲಿಷರಿಗೆ ಅವರ ಭಯವೇ ತಪ್ಪಿದ್ದಿಲ್ಲ. ಇತ್ತ ರಾಯಣ್ಣನು ದೊಡ್ಡ ದಂಡು ಕೂಡಿಸಿ ಸಂಪಗಾವಿ, ಖಾನಾಪೂರ, ನಂದಗಡ ಮೊದಲಾದವುಗಳನ್ನು ಹಿಡಿದುಕೊಂಡನು. ಹಲ್ಲಿಯಾಳ ಕೋಟೆಯನ್ನು ಕೈವಶಮಾಡಿಕೊಂಡು, ಕುಸುಗಲ್ಲಿಗೆ ಹೋಗಿ ಚಿಕ್ಕ ದೇಸಾಯಿಯನ್ನೂ, ವೀರವ್ವರಾಣಿಯನ್ನೂ ಬಿಡುಗಡೆ ಮಾಡಬೇಕೆಂದೂ, ತರುವಾಯ ಬೈಲಹೊಂಗಲ ಕೋಟೆಯನ್ನು ಮುತ್ತಿ ಚೆನ್ನಮ್ಮ ರಾಣಿಯನ್ನು ಬಿಡಿಸಿಕೊಂಡು ಕಿತ್ತೂರು ವಶಪಡಿಸಿಕೊಳ್ಳಬೇಕೆಂದೂ ಅವನು ಎಣಿಕೆ ಹಾಕಿದ್ದನು. ರಾಯಣ್ಣನ ಸಾಹಸದ ಕಾರ್ಯಗಳನ್ನು ನೋಡಿ ಇಂಗ್ಲಿಷರು ಬೆದರಿದರು. ಕಿತ್ತೂರ ಕಲಿಗಳ ಧೈರ್ಯ-ಸಾಹಸಗಳನ್ನು ನೋಡಿ ಅವರು ಬೆರಗಾದರು. ರಾಯಣ್ಣನು ಹಲ್ಲಿಯಾಳ ಕೋಟೆಯನ್ನು ವಶಪಡಿಸಿಕೊಂಡನು. ಇನ್ನುಮೇಲೆ ಕುಸೂಗಲ್ಲಿಗೆ ಹೊರಡಬೇಕೆಂದು ಅವನ ಎಣಿಕೆಯಿತ್ತು. ಅಷ್ಟರಲ್ಲಿ ಚ್ಯಾಪ್ಲಿನ್‌ನು ಸೆರೆಯಾಳುಗಳನ್ನು ಕುಸೂಗಲ್ಲಿನಿಂದ ಧಾರವಾಡಕ್ಕೆ ಗುಪ್ತವಾಗಿ ಕಳುಹಿಸಿದನು.

ಸಂಪಗಾವಿಯ ಮಾಮಲೇದಾರ ಕೃಷ್ಣರಾಯನೂ ಅವನ ಅನುಯಾಯಿಗಳೂ ಇಂಗ್ಲಿಷರಿಂದ ಲಾಭ ಪಡೆಯಬೇಕೆಂಬ ಸ್ವಾರ್ಥಕ್ಕೆ ಬಿದ್ದರು. ಅವರು ಮೋಸದಿಂದ ರಾಯಣ್ಣನನ್ನು ಹಿಡಿದು ಇಂಗ್ಲಿಷರ ವಶಕ್ಕೆ ಕೊಟ್ಟರು. ರಾಯಣ್ಣನ ಅನುಯಾಯಿಗಳಾದ ಬಾಲಣ್ಣ, ಗಜವೀರ ಚೆನ್ನಬಸಪ್ಪ, ನಾಗರಕಟ್ಟಿ ಮೊದಲಾದವರು ತಮ್ಮ ಸೈನ್ಯದೊ

ಡನೆ ಇಂಗ್ಲಿಷ ಸೈನ್ಯವನ್ನು ಎದುರಿಸಿ ಹೋರಾಡಿದರು. ಆದರೆ ಕಿತ್ತೂರ ಸೈನ್ಯವು ಮತ್ತೆ ಪರಾಭವ ಹೊಂದಿತು. ಬಾಲಣ್ಣ ಮೊದಲಾದವರು ಇಂಗ್ಲಿಷರ ಸೆರೆಯಲ್ಲಿ ಸಿಕ್ಕರು.

ಮಾರನೆಯ ದಿನವೇ ರಾಯಣ್ಣ ಮೊದಲಾದವರಿಗೆ ಗಲ್ಲಿನ ಶಿಕ್ಷೆಯಾಯಿತು !

ಬೈಲಹೊಂಗಲದಲ್ಲಿ ಸೆರೆಯಲ್ಲಿದ್ದ ಚೆನ್ನಮ್ಮರಾಣಿಯು ರಾಯಣ್ಣನ ಸಾಹಸದ ಕಾರ್ಯವೇನಾಯಿತೆಂಬ ಆಲೋಚನೆಯಲ್ಲಿಯೆ ಐದು ವರ್ಷ ಕಾಲ ಕಳೆದಳು. ತಾನೊಂದು ಬಗೆದರೆ ದೈವವೊಂದು ಬಗೆಯಿತೆಂಬಂತೆ ಚೆನ್ನಮ್ಮರಾಣಿಯ ಅವಸ್ಥೆಯಾಯಿತು.

ರಾಯಣ್ಣನಿಗೂ ಅವನ ಅನುಯಾಯಿಗಳಿಗೂ ಗಲ್ಲಿನ ಶಿಕ್ಷೆಯಾದ ದಿನ ಸೆರೆಮನೆಯ ಅಧಿಕಾರಿಯು ರಾಣಿಯ ಬಳಿಗೆ ಬಂದು, "ರಾಣೀಸಾಹೇಬರೆ, ನೀವು ಕಂಪನಿ ಸರಕಾರಕ್ಕೆ ಶರಣು ಹೋಗಿ, ಕಪ್ಪ ಕೊಡಲೊಪ್ಪಿದ್ದರೆ ಈ ಅವಸ್ಥೆಯಾಗುತ್ತಿದ್ದಿಲ್ಲ" ಎಂದನು.

"ವಿದೇಶೀಯರ ಗುಲಾಮಗಿರಿಯಲ್ಲಿರುವದಕ್ಕಿಂತ ಮರಣವೇ ಮೇಲು. ನನ್ನ ಈ ಜನ್ಮದಲ್ಲಿ ಸಾಧಿಸದಿದ್ದರೆ ಮುಂದಿನ ಜನ್ಮದಲ್ಲಾದರೂ ಈ ಗುರಿಯನ್ನು ಸಾಧಿಸುವೆನು. ಒಳಜಗಳ, ಸ್ವಾರ್ಥ, ಮೋಸಗಾರಿಕೆಗಳಿಂದ ಎಂಥ ಅವಸ್ಥೆಯಾಗುವದೆಂಬುದಕ್ಕೆ ನಮ್ಮ ಇತಿಹಾಸವೇ ಇನ್ನು ಸಾಕ್ಷಿಯಾಗುವುದು. ಸ್ವದೇಶದ ಸ್ವಾತಂತ್ರ್ಯಕ್ಕಾಗಿಯೆ ಸರ್ವಸ್ವವನ್ನು ಬಲಿದಾನ ಮಾಡಿದ ನನ್ನ ಚರಿತ್ರೆಯು ಭಾರತೀಯರಿಗೆ ಆದರ್ಶಪ್ರಾಯವಾಗಿ ಪರಿಣಮಿಸಿ, ಅವರೆಲ್ಲ ಸ್ವಾತಂತ್ರ್ಯಕ್ಕೆ ಹೋರಾಡಿದರೆ ನನ್ನ ಜನ್ಮ ಸ್ವಾರ್ಥಕವಾದಂತಾಯ್ತು. ನನ್ನ ಸ್ವಾಮಿನಿಷ್ಟ, ರಾಯಣ್ಣನ ಸಾಹಸದ ಮೇಲೆಯೆ ನನ್ನ ಜೀವನವು ಉಳಿದುಕೊಂಡಿದೆ."

" ರಾಣಿಯವರೆ, ರಾಯಣ್ಣ, ಬಾಲಣ್ಣ ಮೊದಲಾದ ವೀರರು ಸೋತು ನಮ್ಮ ಸೈನಿಕರ ಕೈಯಲ್ಲಿ ಸಿಕ್ಕರು. ಅವರೆಲ್ಲರಿಗೂ ಮರಣ ದಂಡನೆಯು ವಿಧಿಸಲ್ಪಟ್ಟಿತು ! "

ಸ್ವಾತಂತ್ರ್ಯದೇವಿ ಕಿತ್ತೂರ ಚೆನ್ನಮ್ಮರಾಣಿಯು ಈ ವಾರ್ತೆಯನ್ನು ಕೇಳಿ ದೊಪ್ಪನೆ ನೆಲಕ್ಕೆ ಬಿದ್ದಳು. ಅವಳು—"ರಾಯಣ್ಣಾ ! ನನ್ನ ಆಶೆಯ ಕಿರಣವಾಗಿದ್ದ ನೀನೂ ಹೊರಟುಹೋದೆಯಾ! ನಾನೂ ಬರುವೆನು. ನಾವೆಲ್ಲರೂ ಮತ್ತೊಂದು ಜನ್ಮ ಪಡೆದು ಭಾರತವನ್ನು ಸ್ವತಂತ್ರಗೊಳಿಸೋಣ !" ಎಂದು ನುಡಿದು ಭೂಮಿಗೆ ಬಿದ್ದಳು. ನೋಡ-ನೊಡುವಷ್ಟರಲ್ಲಿ ಅವಳ ಪಂಚಪ್ರಾಣಗಳು ಜಡದೇಹವನ್ನು ತೊಲಗಿ ಹೊರಟುಹೋದುವು !

ಕಿತ್ತೂರಿನ ಸ್ವಾತಂತ್ರ್ಯದೇವಿಯು ಕಣ್ಮರೆಯಾದಳು. ಅವಳ ಪಾರ್ಥಿವ ದೇಹವನ್ನು ರಾಜೋಚಿತ ಮರ್ಯಾದೆಯಿಂದ ಒಯ್ದು, ಕಿತ್ತೂರಿನ ಕಲ್ಮಠದಲ್ಲಿ ಸಮಾಧಿ ಮಾಡಲಾಯಿತು.





ಬೈಲಹೊಂಗಲದಲ್ಲಿ ಪ್ರತಿಷ್ಠಾಪನೆಯಾದ ಕಿತ್ತೂರ ಚೆನ್ನಮ್ಮರಾಣಿಯ ಪ್ರತಿಮೆ

[ಮೈಸೂರು ಸರಕಾರದ ಕೃಪೆಯಿಂದ]

## ಇತ್ತೀಚಿನ ಪ್ರಕಟಣೆಗಳು

* ರಾಜಬಲಿ — ಸತ್ಯಕಾಮ ೨-೦೦
* ವಿಷಚಕ್ರವ್ಯೂಹ — ಶ್ರೀರಂಗ ೧-೫೦
* ಭಾರತೀಯ ಶಿಕ್ಷಣದ ಇತಿಹಾಸ — ಪ್ರೊ. ನಂಜುಂಡಸ್ವಾಮಿ ೨-೦೦
* ಸಾಧನಾ —ರವೀಂದ್ರನಾಥ ಠಾಕೂರ ೨-೫೦
* ವೇಕ್‌ಫೀಲ್ಡಿನ ಪಾದ್ರಿಮಹಾಶಯ —(Vicar of Wake-field) ೧-೫೦
* ವಿಲಾಪಿಕಾ —ರಾಮಚಂದ್ರ ಕೊಟ್ಟಲಗಿ ೨-೨೫
* ಪಥಭ್ರಾಂತ —ಪ್ರಿಯದರ್ಶಿ ೧೦-೦೦
* ಶುಭದಾ ಶರಚ್ಚಂದ್ರ ೨-೭೫
* ಆಲೇಖ್ಯ " ೨-೫೦
* ಸುಭಾಷಿತರತ್ನಾವಳಿ —ಸಂ| ರಮಾನಂದ ೨-೨೫
* ಮರ್ಯಾದೆ —ಅಂಬಿಕಾತನಯದತ್ತ ೧-೫೦
* ಜಾಗತಿಕ ಸತ್ಯಗಳು (Book of Quotations) ೪-೫೦
* ಗೌರವತಪಸ್ವಿ (ಪತ್ರರೂಪದಲ್ಲಿ ವಿವಿಧ ಜ್ಞಾನಕೋಶ) ೨-೦೦
* ಕಾವ್ಯವ್ಯಾಸಂಗ —ಪ್ರೊ. ಎಲ್. ಆರ್. ಹೆಗಡೆ ೩-೦೦
* ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ —ಶಂ. ಬಾ. ಜೋಶಿ ೧೫-೦೦
* ಠಕ್ಕ-ಠಕ್ಕಿ (ನಗೆನಾಟಕಗಳು) —ಎನ್ಕೆ ೨-೫೦
* ಚನ್ನಬಸವೇಶ್ವರನ ವಚನಗಳು —ಸಂ. ಡಾ|| ಫ. ಗು. ಹಳಕಟ್ಟಿ ೧-೮೦
* ದೇವರ ದಾಸಿಮಯ್ಯನ ವಚನಗಳು " ೧-೫೦

**ಸಮಾಜ ಪುಸ್ತಕಾಲಯ, ಶಿವಾಜಿಬೀದಿ, ಧಾರವಾಡ.**